ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ





❖ ಸಂಪುಟ: 19 ❖ ಸಂಚಿಕೆ: 1 ❖ ಪುಟ: 12 ❖ ಜನವರಿ 1-15, 2015 ❖ ಬೆಲೆ: 1ರೂ-

http://www.salafimangalore.org


# ‘ಇದ್ದಃ’ದ ವೈಜ್ಞಾನಿಕತೆಯನ್ನು ಕಂಡ ಜೂದ ಡಾಕ್ಟರ್ ಇಸ್ಲಾಮಿಗೆ!

ಪವಿತ್ರ ಕುರ್‌ಆನಿನಲ್ಲಿ ಇದ್ದಃದ ಕಾಲಾವಧಿಯಾಗಿ ನಿಶ್ಚಯಿಸಿದ ಸಮಯದ ಕುರಿತು ಅಧ್ಯಯನ ಮಾಡಿದ ಜಗದ್ವಿಖ್ಯಾತ ಅಮೇರಿಕನ್ ಭ್ರೂಣ ವಿಜ್ಞಾನಿ ಡಾ| ರೋಬರ್ಟ್ ಗಿಲ್‌ಹಮ್ ಎಂಬವರು ಇಸ್ಲಾಮ್ ಸ್ವೀಕರಿಸಿದ್ದಾರೆ. ಡಾ| ರೋಬರ್ಟ್ ಗಿಲ್‌ಹಮ್ ಅಮೇರಿಕದ ಆಲ್‌ಬರ್ಟ್ ಐನ್‌ಸ್ಟಿನ್ ರಿಸರ್ಚ್ ಸೆಂಟರ್‌ನ ಸಂಶೋಧಕರಾಗಿದ್ದಾರೆ.

ದಾಂಪತ್ಯ ಸಂಬಂಧದ ಮೂಲಕ ವರ್ಗಾವಣೆಗೊಳ್ಳುವ ಪುರುಷನ ಲೈಂಗಿಕ ಕಣಗಳ ಕುರಿತು ನಡೆಸಿದ ಅಧ್ಯಯದಿಂದ ಕಂಡುಕೊಂಡ ವಿಷಯಗಳಾಗಿವೆ ಗಿಲ್‌ಹಮ್‌ರನ್ನು ಇಸ್ಲಾಮಿಗೆ ತಲುಪಿಸಿದ್ದು. ಪುರುಷನಿಂದ ಸ್ತ್ರೀಯು ಸ್ವೀಕರಿಸುವ ಲೈಂಗಿಕ ಕಣಗಳು ಮೂರು ಆರ್ತವಗಳ ಮೂಲಕ ಸ್ತ್ರೀಯ ರಕ್ತದಿಂದ ತೊಲಗಿಸಲ್ಪಡುತ್ತದೆಯೆಂಬ ವೈಜ್ಞಾನಿಕ ಸತ್ಯವು ಕುರ್‌ಆನಿನೊಂದಿಗೆ ಹೊಂದಾಣಿಕೆಯಾಗುತ್ತದೆಯೆಂದು ಅವರು ತನ್ನ ಅಧ್ಯಯನದಿಂದ ಕಂಡುಕೊಂಡಿದ್ದಾರೆ. ಕುರ್‌ಆನ್ ಸ್ತ್ರೀಯರಿಗೆ ಇದ್ದಃದ ಕಾಲಾವಧಿಯಾಗಿ ನಿಶ್ಚೈಸಿದ್ದು ಮೂರು ಆರ್ತವ ಕಾಲಘಟ್ಟಗಳಾಗಿವೆ. ಸ್ತ್ರೀ-ಪುರುಷರು ದೈಹಿಕ ಸಂಪರ್ಕ ನಡೆಸಿದರೆ ಪುರುಷನ ರಕ್ತದೊಂದಿಗೆ ಸಂಬಂಧವುಳ್ಳ ಒಂದು ಲೈಂಗಿಕ ಕಣವು ಸ್ತ್ರೀಯ ದೇಹದೊಳಗೆ ಪ್ರವೇಶಿಸುತ್ತದೆ. ಅದು ಸ್ತ್ರೀಯ ದೇಹದಿಂದ ಪೂರ್ಣವಾಗಿ ತೊಲಗಿಸಲ್ಪಡಲು ಮೂರು ಆರ್ಥವ ಕಾಲ ಘಟ್ಟಗಳು ಬೇಕಾಗುತ್ತವೆಯೆಂದು ಅಧ್ಯಯನಗಳು ಸ್ಪಷ್ಟ ಪಡಿಸುತ್ತವೆ. ಒಂದು ಆರ್ತವದಿಂದ 30-35 ಶೇಕಡಾದಷ್ಟು ಪುರುಷ ಕಣವು ಸ್ತ್ರೀ ಶರೀರದಿಂದ ತೊಲಗಿಸಲ್ಪಡುತ್ತದೆ. ಹೀಗೆ ಮೂರು ಆರ್ತವಗಳಿಂದ ಶರೀರವು ಪೂರ್ಣವಾಗಿ ಶುದ್ಧೀಕರಿಸಲ್ಪಡುತ್ತದೆ. ಆ ಬಳಿಕ ಇನ್ನೊಬ್ಬ ಪುರುಷನ ಇಂತಹ ಲೈಂಗಿಕ ಕಣಗಳನ್ನು ಸ್ವೀಕರಿಸಲು ಸ್ತ್ರೀ ಶರೀರ ಸನ್ನದ್ಧ ವಾಗುತ್ತದೆ. ಅದಕ್ಕಿಂತ ಮುಂಚೆ ಇನ್ನೊಬ್ಬ ಪುರುಷನೊಂದಿಗೆ ಸಂಪರ್ಕ ನಡೆಸಿದರೆ ಸ್ತ್ರೀಯ ರಕ್ತದಲ್ಲಿ ಈ ಕಣಗಳು ಪರಸ್ಪರ ಮಿಶ್ರಣಗೊಳ್ಳಲು ಕಾರಣ ವಾಗುತ್ತದೆ. ಇದು ಮಾರಕವಾದ ರೋಗಗಳೆಡೆಗೆ ಮತ್ತು ಇನ್ನಿತರ ಸಮಸ್ಯೆ ಗಳೆಡೆಗೆ ಕೊಂಡೊ ಯ್ಯುತ್ತದೆ. ಇದರಿಂದ ಮುಕ್ತಗೊಳ್ಳಲು ಕುರ್‌ಆನ್ ಪೂರ್ಣವಾಗಿ ವೈಜ್ಞಾನಿಕ ನಿಲುವನ್ನು ಹೊಂದಿದೆಯೆಂಬುದನ್ನು ಡಾ| ರಾಬರ್ಟ್ ಗಿಲ್‌ಹಮ್ ಕಂಡು ಹಿಡಿದಿದ್ದಾರೆ. ವಿಜ್ಞಾನಕ್ಕಿಂತ ಸಾವಿರಾರು ವರ್ಷಗಳ ಹಿಂದೆ ಭ್ರೂಣ ಶಾಸ್ತ್ರದ ಈ ಸತ್ಯವನ್ನು ಜಗತ್ತಿನ ಮುಂದೆ ಸಾರಿ ಹೇಳಿದ ಕುರ್‌ಆನ್ ದೈವಿಕ ಗ್ರಂಥವಾಗಿದೆಯೆಂಬುದನ್ನು ಮನ ಗಂಡ ಡಾ| ರೋಬರ್ಟ್ ಗಿಲ್‌ಹಮ್ ದೇವ ಧರ್ಮವಾದ ಇಸ್ಲಾಮನ್ನು ಅಂಗೀಕರಿಸಿ ಮುಸ್ಲಿಮ್ ಆದರು. ●



وَالْمُطَلَّقَاتُ يَتَرَبَّصْنَ بِأَنْفُسِهِنَّ ثَلَاثَةَ قُرُوءٍ وَلَا يَحِلُّ لَهُنَّ أَنْ يَكْتُمْنَ مَا خَلَقَ اللَّهُ فِي أَرْحَامِهِنَّ إِنْ كُنَّ يُؤْمِنَّ بِاللَّهِ وَالْيَوْمِ الْآخِرِ

ವಿವಾಹ ವಿಚ್ಛೇದನೆ ಮಾಡಲ್ಪಟ್ಟ ಸ್ತ್ರೀಯರು ತಮ್ಮ ಶರೀರಗಳೊಂದಿಗೆ ಮೂರು ಆರ್ತವ ಕಾಲಗಳವರೆಗೆ ಕಾದಿರಬೇಕು ಮತ್ತು ಅವರು ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿರಿಸುವವರಾಗಿದ್ದರೆ ತಮ್ಮ ಗರ್ಭಾಶಯಗಳಲ್ಲಿ ಅಲ್ಲಾಹು ಸೃಷ್ಟಿಸಿರುವುದನ್ನು ಬಚ್ಚಿಡುವುದು ಅವರಿಗೆ ಧರ್ಮಬದ್ಧವಾಗುವುದಿಲ್ಲ.....2x228.



ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್‌ನ ಅಧೀನ ಸಂಸ್ಥೆಯಾದ ಸಲಫಿ ಎಜುಕೇಶನ್ ಬೋರ್ಡ್‌ನ ವತಿಯಿಂದ ಮಂಗಳೂರಿನ ರಮಾ ಲಕ್ಷ್ಮಣಾನಂದ ಹಾಲ್‌ನಲ್ಲಿ ನಡೆದ ಸಲಫಿ ಕುಟುಂಬ ಸಂಗಮದಲ್ಲಿ ಕೆ.ವಿ. ಅಬ್ದುಲ್ಲತೀಫ್ ಮೌಲವಿ, ಮೌಲಾನಾ ಮುಹಮ್ಮದ್ ಅಸ್‌ಅದ್ ಫೈರಿಝಿ, ಮೌಲವಿ ಅಬ್ದುಸ್ಸತ್ತಾರ್ ಕೊಳಿಮಾಡ್, ಮೌಲವಿ ಅಹ್ಮದಲಿ ಖಾಸಿಮಿ ಮುಂತಾದ ವಿದ್ವಾಂಸರು ಪ್ರವಚನ ನೀಡಿದರು. ಸಲಫಿ ಎಜುಕೇಶನ್ ಬೋರ್ಡ್‌ನ ಅಧ್ಯಕ್ಷ ಮೌಲವಿ ಹಸನ್ ಶರೀಫ್ ಕುಂಜತ್‌ಬೈಲ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಸಲಫಿ ಮೂವ್‌ಮೆಂಟ್‌ನ ಕೇಂದ್ರ ಸಮಿತಿ ಅಧ್ಯಕ್ಷ ಅಹ್ಮದ್ ಅನ್ವಾರ್, ಉಪಾಧ್ಯಕ್ಷ ಅಬೂಬಕರ್ ಪಾಂಡೇಶ್ವರ, ಪ್ರಧಾನ ಕಾರ್ಯದರ್ಶಿ ಬಶೀರ್ ಅಹ್ಮದ್ ಶಾಲಿಮಾರ್ ಮುಖ್ಯ ಅತಿಥಿಗಳಾಗಿದ್ದರು. ದಅ್‌ವಾ ಕಾರ್ಯದರ್ಶಿ ಇಸ್ಮಾಯೀಲ್ ಶಾಫಿ ಮತ್ತು ಎಂ.ಜಿ. ಮುಹಮ್ಮದ್ ಕಾರ್ಯಕ್ರಮ ನಿರೂಪಿಸಿದರು. ಸಲಫಿ ಎಜುಕೇಶನ್ ಬೋರ್ಡ್‌ನ ಕಾರ್ಯದರ್ಶಿ ಯಾಕೂಬ್ ಕಲ್ಲಾರ್ಪೆ ಪ್ರಾರಂಭದಲ್ಲಿ ಸ್ವಾಗತಿಸಿ, ಕೊನೆಯಲ್ಲಿ ಕೋಶಾಧಿಕಾರಿ ಅಹ್ಮದ್ ಮಾಸ್ಟರ್ ಧನ್ಯವಾದವಿತ್ತರು.



ಸಂಪಾದಕೀಯ

بسم الله الرحمن الرحيم

الحمد لله رب العالمين والصلاة والسلام على نبينا محمد وآله وصحبه أجمعين أما بعد

# ಮತಾಂತರಗೊಂಡವರು ಮುಸ್ಲಿಮರಲ್ಲ!

ಆಗ್ರಾದಲ್ಲಿ ಸಂಘ ಪರಿವಾರದವರು ಹಮ್ಮಿಕೊಂಡಿದ್ದ "ಘರ್‌ವಾಪಸಿ" ಕಾರ್ಯಕ್ರಮದಲ್ಲಿ ಸುಮಾರು 350 ಮಂದಿ ಮುಸ್ಲಿಮರು ಹಿಂದೂ ಧರ್ಮಕ್ಕೆ ಮತಾಂತರಗೊಂಡ ಸುದ್ದಿ ದೇಶದಾದ್ಯಂತ ಸಂಚಲನ ಸೃಷ್ಟಿಸಿದೆ. ರೇಶನ್ ಕಾರ್ಡ್, ಮತದಾರರ ಗುರುತು ಚೀಟಿ, ಉಣ್ಣಲು ಅನ್ನ, ಉಡಲು ಬಟ್ಟೆ, ವಾಸಿಸಲು ಮನೆ ಇತ್ಯಾದಿ ಒದಗಿಸುತ್ತೇವೆಂಬ ಆಮಿಶವೊಡ್ಡಿ ಮತಾಂತರ ಮಾಡಲಾಗಿದೆಯೆಂಬ ಆರೋಪಗಳು ಕೇಳಿ ಬರುತ್ತಿವೆ. ಕೆಲವು ರಾಜಕೀಯ ಪಕ್ಷಗಳು ಸಂಸತ್ತಿನಲ್ಲೂ ಹೊರಗೂ ಸರಕಾರದ ವಿರುದ್ಧ ಪ್ರತಿಭಟನೆ ನಡೆಸುತ್ತಿರುವುದು ಶ್ಲಾಘನೀಯವೇ. ಅನ್ಯ ಮತೀಯ ಯುವತಿಯರು ಮುಸ್ಲಿಮ್ ಯುವಕರನ್ನು ಪ್ರೇಮಿಸಿ ವಿವಾಹವಾಗುವುದನ್ನು "ಲವ್ ಜಿಹಾದ್" ಎಂಬ ಹೆಸರಿಟ್ಟು ಕೋಮು ಗಲಭೆ ಸೃಷ್ಟಿಸಲೆತ್ನಿಸುವ ಮಂದಿ ಇದೀಗ ರೇಶನ್ ಕಾರ್ಡ್. ವೋಟರ್ ಐಡಿಯ ಆಮಿಶವೊಡ್ಡಿ ಮುಸ್ಲಿಮರೆಂದು ಹೇಳಿಕೊಳ್ಳುವ ಕೆಲವರನ್ನು ತಮ್ಮ ಮನೆಗೆ ವಾಪಸು ಕರೆಸಿಕೊಳ್ಳುತ್ತಿರುವುದು ಯಾವ ಜಿಹಾದ್ ಎಂದು ಪ್ರಶ್ನಿಸಬೇಕಾಗಿದೆ.

ಆಗ್ರಾದ ಘರ್‌ವಾಪಸಿ ಕಾರ್ಯಕ್ರಮದಲ್ಲಿ ಮತಾಂತರಗೊಂಡ ಮುಸ್ಲಿಮರು ಅಲ್ಲಾಹು ಮತ್ತು ಅವನ ಸಂದೇಶವಾಹಕನ್ನು ಅಂಗೀಕರಿಸುವ, ಕುರ್‌ಆನ್ ಮತ್ತು ಸುನ್ನತ್ತನ್ನು ಅನುಸರಿಸುವ, ನಮಾಝ್ ನಿರ್ವಹಿಸುವ, ಉಪವಾಸ ವ್ರತ ಆಚರಿಸುವ, ಇಸ್ಲಾಮಿನ ವಿಶ್ವಾಸಾಚಾರಗಳನ್ನು ಅನುಷ್ಠಿಸುವ ನೈಜ ಮುಸ್ಲಿಮರಲ್ಲ. ಈ ಮಂದಿ ದರ್ಗಾಗಳಿಗೆ ಸುಜೂದ್ ಮಾಡುವ, ಅನ್ಯ ಮತೀಯ ವಿಶ್ವಾಸಾಚಾರಗಳನ್ನು ಅನುಷ್ಠಿಸುವ, ಅನ್ಯ ಮತೀಯರ ಆರಾಧ್ಯ ವಸ್ತುಗಳನ್ನು ಪೂಜಿಸುವ ಮುಸ್ಲಿಮ್ ನಾಮಧಾರಿಗಳಾಗಿದ್ದಾರೆ. ಅಲ್ಲಾಹನನ್ನೂ ರಸೂಲರನ್ನೂ ಅನುಸರಿಸುವ, ಪರ ಲೋಕವನ್ನು ಭಯ ಪಡುವ ನೈಜ ಮುಸ್ಲಿಮರು ಯಾವುದೇ ಆಮಿಶ, ಬೆದರಿಕೆಗಳಿಗೆ ಬಲಿಯಾಗಿ ಮತಾಂತರಗೊಳ್ಳುವುದಿಲ್ಲ. ಅಲ್ಲಾಹನನ್ನು ಮಾತ್ರ ಆರಾಧಿಸುವ, ಅವನೊಂದಿಗೆ ಮಾತ್ರ ಪ್ರಾರ್ಥಿಸುವ ಸತ್ಯವಿಶ್ವಾಸಿಗಳಾದ ಮುಸ್ಲಿಮರು ಮರಣಾ ನಂತರದ ಸ್ವರ್ಗೀಯ ಸುಖ-ಸಮೃದ್ಧಿಗಾಗಿ ಭೂಲೋಕದಲ್ಲಿ ಎಲ್ಲಾ ವಿಧದ ಕಷ್ಟ, ನಷ್ಟ, ಪೀಡನೆಗಳನ್ನು ಸಹಿಸಲು ಸಿದ್ಧರಾಗುತ್ತಾರೆ.

ದೇಶದಲ್ಲಿ ಮುಸ್ಲಿಮರೆಂದು ಕರೆಸಿಕೊಳ್ಳುವ ಬಹುತೇಕ ಮಂದಿ ಇಸ್ಲಾಮಿನ ಪ್ರಾಥಮಿಕ ಜ್ಞಾನ ಕೂಡಾ ಇಲ್ಲದೆ ಮುಸ್ಲಿಮೇತರರ ವಿಶ್ವಾಸಾಚಾರಗಳಲ್ಲೇ ಜೀವಿಸುತ್ತಿದ್ದಾರೆ. ಮನೆ, ಮಸೀದಿಗಳಲ್ಲಿ ದೇವತಾ ವಿಗ್ರಹಗಳನ್ನಿಟ್ಟು ಪೂಜಿಸುವ ಮುಸ್ಲಿಮರು, ಅನ್ಯ ಮತೀಯರ ಧಾರ್ಮಿಕ ಹಬ್ಬಗಳನ್ನು ಆಚರಿಸುವ ಮುಸ್ಲಿಮರು, ದರ್ಗಾಗಳಿಗೆ ಹರಕೆ ಹಾಕಿ ಮೃತರೊಂದಿಗೆ ಪ್ರಾರ್ಥಿಸುವ ಮುಸ್ಲಿಮರು, ಮೌಲೀದ್ ಆಚರಿಸಿ ಪ್ರವಾದಿ(ಸ)ರೊಂದಿಗೆ ಪ್ರಾರ್ಥಿಸುವ ಮುಸ್ಲಿಮರು, ರಾತೀಬ್-ಕುತುಬಿಯತ್ ಆಚರಿಸಿ ಮೊಹಿದ್ದೀನ್ ಶೈಖ್ ಹಾಗೂ ರಿಫಾಯಿ ಶೈಖ್‌ರೊಂದಿಗೆ ಪ್ರಾರ್ಥಿಸುವ ಮುಸ್ಲಿಮರು, ನಾಗದೋಷದ ನಿವಾರಣೆಗಾಗಿ ನಾಗ ಬ್ರಹ್ಮನಿಗೆ ಗುಡಿ ಕಟ್ಟಿ ಕೊಡುವ ಮುಸ್ಲಿಮರು, ಮನೆಯ ಭೂತ ಬಾಧೆ ನಿವಾರಣೆಗಾಗಿ ಹೋಮ-ಮಂತ್ರ ಮಾಡಿಸುವ ಮುಸ್ಲಿಮರು, ರೋಗ ಶಮನಕ್ಕಾಗಿ ಕೈಕಾಲು, ಸೊಂಟಕ್ಕೆ ಮಂತ್ರಿಸಿದ ನೂಲು, ತಾಯಿತ ಕಟ್ಟುವ ಮುಸ್ಲಿಮರು, ಉಸ್ತಾದ್ ತಂಙಳ್, ಶೈಖಿನಾಗಳು ಮಂತ್ರಿಸಿದ ನೀರನ್ನು ಕುಡಿದು ಮಡೆಸ್ನಾಹ ಮಾಡುವ ಮುಸ್ಲಿಮರು, ಬರ್ಕತ್‌ಗಾಗಿ ಅವುಲಿಯಾ, ಬೀವಿ, ಬಾಬಾ, ತಂಙಳ್‌ಗಳ ಕೈಕಾಲು ಚುಂಬಿಸುವ ಮುಸ್ಲಿಮರು, ಎ.ಪಿ. ಉಸ್ತಾದರ ಗಮನಕ್ಕೆ ಬಾರದೆ ಅಲ್ಲಾಹು ಯಾವುದೇ ತೀರ್ಮಾನ ಕೈಗೊಳ್ಳುವುದಿಲ್ಲ ಎಂದು ನಂಬುವ ಮುಸ್ಲಿಮರು, ಜಿನ್ನ್-ಸಿಹ್ರ್‌ಗಳಿಗೆ ಹೆದರುವ ಮುಸ್ಲಿಮರು, ಅನ್ಯ ಮತೀಯರ ಧಾರ್ಮಿಕ ಕಾರ್ಯಕ್ರಮಗಳಿಗೆ ಶುಭ ಕೋರಿ ಬ್ಯಾನರ್ ಹಾಕುವ ಮುಸ್ಲಿಮರು ಮತ್ತು ಇಂತಹ ಮುಸ್ಲಿಮರ ಶಿರ್ಕ್, ಬಿದ್‌ಅತ್ ಮತ್ತು ಕುಫ್ರಿಯತ್‌ಗಳಿಗೆಲ್ಲಾ ಪ್ರೋತ್ಸಾಹ ಹಾಗೂ ಅಂಗೀಕಾರ ನೀಡಿ ಆಶೀರ್ವದಿಸುವ ಪುರೋಹಿತರು ಮುಂತಾದವರೆಲ್ಲಾ ಸಕಲ ಸ್ತುತಿ, ಕೀರ್ತನೆ, ಪ್ರಶಂಸೆಗಳನ್ನು ಅಲ್ಲಾಹನಿಗೆ ಮಾತ್ರ ಅರ್ಪಿಸಿ, ಅಲ್ಲಾಹನನ್ನು ಮಾತ್ರ ಆರಾಧಿಸಿ, ಅಲ್ಲಾಹನೊಂದಿಗೆ ಮಾತ್ರ ಪ್ರಾರ್ಥನೆ ಸಹಾಯಾರ್ಥನೆಗಳನ್ನು ಮಾಡಿ, ಅಲ್ಲಾಹನಿಂದ ಮಾತ್ರವೇ ಸಕಲ ಅನುಗ್ರಹ ಬರ್ಕತ್‌ಗಳನ್ನು ಆಕಾಂಕ್ಷಿಸಬೇಕೆಂದು ಕಟ್ಟುನಿಟ್ಟಾಗಿ ಆಜ್ಞಾಪಿಸಿದ ಇಸ್ಲಾಮ್ ಎಂಬ ದೈವಿಕ ಧರ್ಮದ ದೃಷ್ಟಿಯಲ್ಲಿ ನೈಜ ಮುಸ್ಲಿಮರಾಗಲು ಸಾಧ್ಯವೇ? ಇಂತಹ ಮುಸ್ಲಿಮರನ್ನು ರೇಶನ್ ಕಾರ್ಡ್, ವೋಟರ್ ಐಡಿ ಮತ್ತು ತಲಾ 5 ಲಕ್ಷ ರೂ. ಕೊಟ್ಟು ಯಾರಾದರೂ ಖರೀದಿಸಿದರೆ ಆಶ್ಚರ್ಯ ಪಡಬೇಕಾಗಿಲ್ಲ. ಇಂತಹ ನಾಮಧಾರಿ ಮುಸ್ಲಿಮರ ಅಗತ್ಯವೂ ಅಲ್ಲಾಹನಿಗಿಲ್ಲ.

ಹೀಗಿರುವಾಗ ಅಲ್ಲಾಹನ ಕುರಿತು, ಅಲ್ಲಾಹನ ಧರ್ಮದ ಕುರಿತು ಸರಿಯಾದ ತಿಳುವಳಿಕೆಯಿಲ್ಲದ ಮುಸ್ಲಿಮರಿಗೆ ಮತ್ತು ಮುಸ್ಲಿಮೇತರರಿಗೆ ಇಸ್ಲಾಮಿನ ನೈಜ ವಿಶ್ವಾಸಾಚಾರ, ಕರ್ಮಾನುಷ್ಠಾನಗಳು ಮತ್ತು ಕುರ್‌ಆನ್ ಹಾಗೂ ಸುನ್ನತ್‌ಗಳು ಸಾರುವ ಸೃಷ್ಟಿಕರ್ತನ ಸಂದೇಶಗಳನ್ನು ತಲುಪಿಸಿ ಕೊಡಬೇಕಾದುದು ನೈಜ ಇಸ್ಲಾಮಿನ ಪ್ರತಿಪಾದಕರಾದ ತೌಹೀದಿ ಸಂಘಟನೆಗಳ ಪರಮ ಕರ್ತವ್ಯವಾಗಿದೆ. ಆದರೆ ಉಗ್ರ ಮನೋಭಾವದ ಕೆಲ ಶೈತಾನನ ಪುತ್ರರು ಫಿತ್ನ, ಫಸಾದ್, ಗೀಬತ್‌ಗಳನ್ನು ಹರಡಿ ತೌಹೀದಿ ಪ್ರಚಾರಾಂದೋಲನವನ್ನು ನಿಷ್ಕ್ರಿಯಗೊಳಿಸುತ್ತಿರುವುದು ಖಂಡನೀಯವಾಗಿದೆ. ಆದ್ದರಿಂದ ಅಲ್ಲಾಹನ ಧರ್ಮವನ್ನು ಮಸೀದಿಯೊಳಗೆ ಮಾತ್ರ ಸೀಮಿತಗೊಳಿಸಿ ಸತ್ಯವನ್ನು ಹೊರಗೆಡಹದೆ ತಮ್ಮ ಟೊಪ್ಪಿ ಮತ್ತು ನಿಲುವಂಗಿಯೊಳಗೆ ಬಚ್ಚಿಟ್ಟು ಬೇಜವಾಬ್ದಾರರಾಗಿ ಕಾಲ ಕಳೆಯುತ್ತಿರುವವರೇ ಅಹ್ಲೇ ಹದೀಸ್‌ಗಳೇ, ಮಸೀದಿಗಳಿಂದ ಹೊರಗಿಳಿದು ಮನೆಮನೆಗೆ ಅಲ್ಲಾಹನ ತೌಹೀದನ್ನು ತಲುಪಿಸಿ. ಶಿರ್ಕ್, ಬಿದ್‌ಅತ್, ಕುರಾಫಾತ್‌ಗಳಲ್ಲಿ ಮುಳುಗಿರುವ ಮುಸ್ಲಿಮ್ ನಾಮಧಾರಿಗಳಿಗೆ ಕುರ್‌ಆನ್ ಹಾಗೂ ಸುನ್ನತ್‌ಗಳನ್ನು ಸಾರುವ ತತ್ವಾದರ್ಶಗಳನ್ನು ಕಲಿಸಿಕೊಡಿ. ಮನುಕುಲದ ಮುಕ್ತಿ ಮಾರ್ಗವಾದ ಪವಿತ್ರ ಇಸ್ಲಾಮನ್ನು ಮಸೀದಿಯೊಳಗಿಂದ ಹೊರ ತಂದು ಬಹಿರಂಗ ವೇದಿಕೆಗಳಲ್ಲಿ ಜನ ಸಮೂಹದ ಮುಂದೆ ಬಿತ್ತರಿಸಿ. ಇಲ್ಲದಿದ್ದರೆ ನಿಮ್ಮನ್ನು ಭೂಮಿಯೊಳಗೆ ಹೂತು, ಅಲ್ಲಾಹು ತನ್ನ ಧರ್ಮ ಪ್ರಚಾರಕ್ಕಾಗಿ ಇನ್ನೊಂದು ಸಮುದಾಯವನ್ನು ಹೊರ ತರುವನೆಂಬುದು ನೆನಪಿರಲಿ! ●

## ಪವಿತ್ರ ಇಸ್ಲಾಂ ಮುಸ್ಲಿಮೇತರರು ಹೇಳುವಂತೆ...



ಸರೋಜಿನಿ ನಾಯ್ಡು
ಸಾಹಿತಿ,
ಭಾರತದ ಸ್ವಾತಂತ್ರ್ಯ ಹೋರಾಟಗಾರ್ತಿ

"ನಮಾಝ್ ಮಾಡುವಾಗ ರಾಜನೂ ಪ್ರಜೆಯೂ ಭುಜಕ್ಕೆ ಭುಜ ತಾಗಿಸಿ "ಅಲ್ಲಾಹನೇ ಮಹಾನನು" ಎಂದು ಘೋಷಿಸುತ್ತಾ ಸಾಷ್ಟಾಂಗವೆರಗುವಾಗ ಇಸ್ಲಾಮಿನ ಪ್ರಜಾಸತ್ತೆಯು ರೂಪು ತಾಳುತ್ತದೆ. ಓರ್ವ ಮನುಷ್ಯನು ಹುಟ್ಟಿನಿಂದಲೇ ಇನ್ನೊಬ್ಬ ಮನುಷ್ಯನ ಸಹೋದರನೆಂದು ಪರಿಗಣಿಸುವ ಇಸ್ಲಾಮಿನ ಏಕತೆಯು ನನ್ನನ್ನು ಹಲವು ಬಾರಿ ಮಂತ್ರ ಮುಗ್ಧಗೊಳಿಸಿದೆ. ಇಸ್ಲಾಮಿನಲ್ಲಿ ಮೇಲು ಕೀಳು ಎಂಬ ಬೇಧ ನೀತಿಗೆ ಯಾವುದೇ ಸ್ಥಾನವಿಲ್ಲ."

## ಪ್ರವಾದಿ(ಸ.ಅ)ರು ಮುಸ್ಲಿಮೇತರರು ಹೇಳುವಂತೆ...



ಜಾರ್ಜ್ ಬರ್ನಾರ್ಡ್ ಶಾ
(1856–1950)
ಬ್ರಿಟನಿನ ಪ್ರಖ್ಯಾತ ನಾಟಕಕಾರ,
ಸಾಹಿತಿ.

"ಮಹಮ್ಮದರ ಧರ್ಮದ ಬಗ್ಗೆ ನಾನು ಅರಿತುಕೊಂಡಾಗಲೇ ನನ್ನ ಮನಸ್ಸಿನಲ್ಲಿ ಒಂದು ಗೌರವಭಾವ ಮೂಡಿತ್ತು. ಇದಕ್ಕೆ ಕಾರಣವಾದ ಅಂಶ ಅವರ ಜೀವನಶೈಲಿಯೇ ಆಗಿತ್ತು. ಮುಂದಿನ ಶತಮಾನದಲ್ಲಿ ಯುರೋಪನ್ನು ಆಳುವ ನೈಜ ಅಧಿಕಾರವಿದ್ದರೆ ಅದು ಇಸ್ಲಾಂ ಧರ್ಮಕ್ಕೆ ಮಾತ್ರ. ನಾನು ಅವರ ಬಗ್ಗೆ ಕಲಿತೆ. ನಿಜಕ್ಕೂ ಅಪರೂಪದ ಅಚ್ಚರಿ ಮೂಡಿಸುವಂತಹ ವ್ಯಕ್ತಿತ್ವ ಅವರದ್ದು. ಅವರು ಇಂದು ಜೀವಂತವಾಗಿರುತ್ತಿದ್ದರೆ ಮಾನವ ನಾಗರೀಕತೆಯನ್ನು ಹಾಳುಮಾಡುವ ಎಲ್ಲಾ ಸಮಸ್ಯೆಗಳನ್ನು ಯಶಸ್ವಿಯಾಗಿ ಪರಿಹರಿಸುತ್ತಿದ್ದರು. ನನ್ನ ಅಭಿಪ್ರಾಯದಂತೆ ಅವರನ್ನು ಮಾನವ ಕುಲದ ವಿಮೋಚಕರೆಂದೇ ಕರೆಯಬೇಕು."

# ಮೌಲೀದ್: ಯಹೂದಿ ನಿರ್ಮಿತ ಕಟ್ಟು ಕಥೆಗಳು!

ಅಬೂ ಆಯಿಶಾ

ಮೌಲೀದ್ ಪಾರಾಯಣವೆಂಬುದು ನಕಲಿ ಸುನ್ನಿಗಳ ಒಂದು ಪ್ರಮುಖ ಆರಾಧನೆಯಾಗಿ ಮಾರ್ಪಟ್ಟಿದೆ. ನಮಾಝ್ ಮಾಡದಿದ್ದರೂ, ವ್ರತ ಅನುಷ್ಠಿಸದಿದ್ದರೂ, ಝಕಾತ್ ಕೊಡದಿದ್ದರೂ, ಕಲಿಮಾ ಉಚ್ಚರಿಸದಿದ್ದರೂ ಪರವಾಗಿಲ್ಲ. ವರ್ಷಕ್ಕೊಮ್ಮೆ ಮೌಲೀದ್ ಆಚರಿಸಿದರೆ ವಿಚಾರಣೆಯಿಲ್ಲದೇ ಸ್ವರ್ಗಕ್ಕೆ ಹೋಗಬಹುದು ಎಂಬ ಅಂಧ ವಿಶ್ವಾಸವನ್ನು ಹೊಟ್ಟೆಬಾಕ ಮ್ಯೊಲಾರ್‌ಗಳು ಸಮುದಾಯದ ಮಧ್ಯೆ ಹುಲುಸಾಗಿ ಬೆಳೆಸಿ ಬಿಟ್ಟಿದ್ದಾರೆ. ಕಾರಣ ಮೌಲೀದ್ ಎಂಬುದು ಮುಸ್ಲಿಯಾರ್‌ಗಳ ಆದಾಯದ ಮೂಲವಾಗಿದೆ. ರಬೀವುಲ್ ಅವ್ವಲ್ ತಿಂಗಳಲ್ಲಿ ಪ್ರತೀ ಮನೆ, ಮಸೀದಿ, ಮದ್ರಸ, ಅಂಗಡಿ, ಹೊಟೇಲ್‌ಗಳಲ್ಲಿ ಮೌಲೀದ್ ಪಾರಾಯಣ ಮಾಡಿ ಹೊಟ್ಟೆ, ಜೇಬು ತುಂಬಿಸುತ್ತಿರುವ ಅಂಧವಿಶ್ವಾಸಿ ಮುಸ್ಲಿಯಾರ್‌ಗಳು ಮನೆ ಮನೆಗಳಲ್ಲಿ ಮೌಲೀದ್ ಓದಿ ಹಣ ಮತ್ತು ಅನ್ನ ಮುಕ್ಕುತ್ತಿದ್ದಾರೆ. ರಬೀವುಲ್ ಅವ್ವಲ್ ತಿಂಗಳಲ್ಲಿ ಮಾತ್ರವಲ್ಲ, ವರ್ಷವಿಡೀ ಮದುವೆಯ ಮುನ್ನಾ ದಿನ, ಮುಂಜಿ ಮದುವೆ, ಗರ್ಭಿಣಿ ಮದುವೆ, ಹಜ್‌ಗೆ ಅಥವಾ ಗಲ್ಫ್‌ಗೆ ಉದ್ಯೋಗಕ್ಕೆ ಹೋಗುವಾಗ, ಮನೆ ಅಂಗಡಿ ಒಕ್ಕಲಿಗೆ ಇತ್ಯಾದಿ ಸಂದರ್ಭಗಳಲ್ಲೆಲ್ಲಾ ಈ ಮೌಲೀದ್ ಎಂಬ ಕಟ್ಟು ಕಥೆಯನ್ನು ಮುಸ್ಲಿಯಾರ್‌ಗಳಿಂದ ಓದಿಸಿ ಕೃತಾರ್ಥರಾಗುತ್ತಿದ್ದಾರೆ. ಮೌಲೀದ್‌ಗಳೆಂದರೆ ಪ್ರವಾದಿ(ಸ)ರ ಮದ್‌ಹ್ ಎಂದು ವಿಶ್ಲೇಷಿಸಿ ಅರಬಿ ತಿಳಿಯದ ಪಾಮರ ಮಂದಿಯ ವಿಶ್ವಾಸವನ್ನು ಕೊಳ್ಳೆ ಹೊಡೆದು ನಿರಂತರ ಶೋಷಣೆ ಮಾಡುವ ಷಡ್ಯಂತ್ರವೊಂದು ಹಿಜ್ರಾ 4ನೇ ಶತಮಾನದಿಂದ ಆರಂಭಗೊಂಡಿದೆ. ಮಂಕೂಸ್ ಮೌಲೀದ್, ಬರ್‌ಝಂಜಿ ಮೌಲೀದ್, ಶರ್‌ಫಲ್ ಅನಾಮ್ ಮೌಲೀದ್, ಸುಬುಹಾನ ಮೌಲೀದ್ ಇತ್ಯಾದಿ ಹಲವು ವಿಧದ, ಒಂದಕ್ಕೊಂದು ವೈರುಧ್ಯವಾದ ಮೌಲೀದ್‌ಗಳು ಚಲಾವಣೆಯಲ್ಲಿದ್ದು, ಈ ಮೌಲೀದ್‌ಗಳನ್ನು ಅರ್ಥ ಸಹಿತ ಅಧ್ಯಯನ ಮಾಡಿದರೆ ಇದು ಪ್ರವಾದಿ(ಸ)ರ ಹೆಸರಲ್ಲಿ ಅಲ್ಲಸಲ್ಲದ ಸುಳ್ಳುಗಳನ್ನು ಹೆಣೆದು ಯಹೂದಿಗಳು ನಿರ್ಮಿಸಿದ ಅಪ್ಪಟ ಕಟ್ಟು ಕಥೆಗಳಾಗಿವೆಯೆಂಬ ಸತ್ಯ ಮನವರಿಕೆಯಾಗುತ್ತದೆ.

ಕಳೆದ 14 ಶತಮಾನಗಳಿಂದ ವಿಶ್ವದಲ್ಲಿ ಅಜೇಯವಾಗಿ ನೆಲೆ ನಿಂತಿರುವ ದಿವ್ಯ ಕುರ್‌ಆನ್ ಹಾಗೂ ಹದೀಸ್‌ಗಳು ಸಾರುವ ವಿಶ್ವಾಸಾದರ್ಶಗಳಿಗೆ ತದ್ವಿರುದ್ಧವಾದ, ಸೃಷ್ಟಿಯನ್ನು ಸೃಷ್ಟಿಕರ್ತನ ಸ್ಥಾನಕ್ಕೇರಿಸುವ, ಪ್ರವಾದಿ(ಸ)ರಿಗಿಂತಲೂ ಅವರ ಅನುಯಾಯಿಗಳು ಶ್ರೇಷ್ಠರೆಂದು ಬಿಂಬಿಸುವ, ಯಹೂದೀ, ಶಿಯಾ ಸಿದ್ಧಾಂತವನ್ನು ಇಸ್ಲಾಮಿನೊಳಗೆ ತುರಿಕಿ ಇಸ್ಲಾಮಿನ ಏಕದೇವಾರಾಧನೆಯ ಸಿದ್ಧಾಂತಕ್ಕೆ ಕಳಂಕ ಹಚ್ಚುವ ಮೌಲೀದ್‌ಗಳೆಂಬ ಸುಳ್ಳಿನ ಕಂತೆಗಳನ್ನು ಬಿಚ್ಚಿ ನೋಡುವುದು ಪಾರತ್ರಿಕ ವಿಜಯದ ದೃಷ್ಟಿಯಿಂದ ಅತೀ ಅಗತ್ಯವಾಗಿದೆ.

ಪ್ರವಾದಿ ನೂಹ್(ಅ)ರವರ ಕಾಲದಲ್ಲುಂಟಾದ ಜಲಪ್ರಳಯದಿಂದ ನೂಹ್(ಅ)ರನ್ನೂ ಅವರ ಅನುಯಾಯಿಗಳನ್ನೂ ರಕ್ಷಿಸಿದ್ದು ಅಲ್ಲಾಹನೆಂಬುದರಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಅಲ್ಲಾಹು ಹೇಳುತ್ತಾನೆ:

"ನೂಹ್ ಹೇಳಿದರು: ನನ್ನ ಪ್ರಭುವೇ, ನನ್ನ ಸಮುದಾಯವು ನನ್ನನ್ನು ತಿರಸ್ಕರಿಸಿದೆ. ಆದ್ದರಿಂದ ನನ್ನ ಮತ್ತು ಅವರ ನಡುವೆ ನೀನು ತೀರ್ಪನ್ನು ವಿಧಿಸು. ನನ್ನನ್ನು ಹಾಗೂ ನನ್ನೊಂದಿಗಿರುವ ಸತ್ಯವಿಶ್ವಾಸಿಗಳನ್ನು ನೀನು ರಕ್ಷಿಸು. (ಕುರ್‌ಆನ್ 26: 117, 118) ನೂಹ್(ಅ)ರವರು ಜಲಪ್ರಳಯದಿಂದ ರಕ್ಷಣೆ ಹೊಂದಲು ಅಲ್ಲಾಹೇತರರಲ್ಲಿ ಸಹಾಯ ಯಾಚಿಸಿದ್ದರೆಂದು ಸೂಕ್ಷ್ಮದರ್ಶಕ ಹಿಡಿದು ಹುಡುಕಿದರೂ ಕುರ್‌ಆನಿನಲ್ಲೆಲ್ಲೂ ಕಾಣಲು ಸಾಧ್ಯವಿಲ್ಲ. ಆದರೆ ಮೌಲೀದ್‌ನಲ್ಲಿ ಬರೆದ ಸುಳ್ಳನ್ನು ನೋಡಿರಿ"

"ನೂಹ್(ಸ)ರವರು ಪ್ರವಾದಿ(ಸ)ರಲ್ಲಿ ಸಹಾಯ ಯಾಚಿಸಿದ್ದರಿಂದ ಆ ಮಹಾ ವಿಪತ್ತಿನಿಂದ ಪಾರಾದರು". (ಮಂಕೂಸ್ ಮೌಲೀದ್). "ನೂಹ್(ಅ)ರವರು ಹಡಗಿನಲ್ಲಿದ್ದಾಗ ಅಲ್ಲಾಹನು ಅವರ ಬೆನ್ನಿನಲ್ಲಿ ಪ್ರವಾದಿ(ಸ)ರನ್ನು ನಿಕ್ಷೇಪಿಸಿದನು". (ಶರ್‌ಫಲ್ ಅನಾಮ್ ಮೌಲೀದ್)

ದಿವ್ಯ ಕುರ್‌ಆನ್ ಹೇಳುವುದನ್ನು ನೋಡಿರಿ:

"ಅಲ್ಲಾಹನು (ಪ್ರವಾದಿ ನೂಹ್ ಹಾಗೂ ಸತ್ಯ ವಿಶ್ವಾಸಿಗಳೊಂದಿಗೆ) ಹೇಳಿದನು: "ನೀವು ಹಡಗನ್ನು ಏರಿಕೊಳ್ಳಿರಿ, ಅದು ಚಲಿಸುವುದೂ, ನಿಲ್ಲುವುದೂ ಅಲ್ಲಾಹನ ನಾಮದಲ್ಲಾಗಿದೆ". (ಕುರ್‌ಆನ್ 11:41)

ಇದನ್ನೇ 54:41ರಲ್ಲೂ ಹೇಳಿದೆ. ಆದರೆ ಕುರ್‌ಆನ್‌ಗೆ ವಿರುದ್ಧವಾಗಿ ಮೌಲೀದ್‌ನಲ್ಲಿ ಬರೆದಿರುವ ಸುಳ್ಳನ್ನು ನೋಡಿರಿ:

"ಪ್ರವಾದಿ ಮುಹಮ್ಮದ್(ಸ)ರಿಂದಾಗಿ ನೂಹ್(ಅ)ರವರು ತೂಫಾನಿನಿಂದಲೂ ಮುಳುಗುವಿಕೆಯಿಂದಲೂ ಪಾರಾದರು. ಹಡಗು ಸುರಕ್ಷಿತವಾಗಿ ಮತ್ತು ಸುಖಕರವಾಗಿ ಚಲಿಸಿದ್ದು ಪ್ರವಾದಿ ಮುಹಮ್ಮದ್(ಸ)ರ ನಾಮದಲ್ಲಾಗಿದೆ". (ಶರ್‌ಫಲ್ ಅನಾಮ್ ಮೌಲೀದ್)

ಪ್ರವಾದಿ ಇಬ್ರಾಹೀಮ್(ಅ)ರನ್ನು ನಮ್ರೂದನ ಅಗ್ನಿಕುಂಡದಿಂದ ರಕ್ಷಿಸಿದ್ದು ಅಲ್ಲಾಹನಾಗಿದ್ದಾನೆಂದು ಕುರ್‌ಆನ್‌ನಲ್ಲಿ ಹೇಳುವುದನ್ನು ನೋಡಿರಿ" "ಸತ್ಯನಿಷೇಧಿಗಳ ಉತ್ತರವು ಅವನನ್ನು ಕೊಲ್ಲಿರಿ ಅಥವಾ ಸುಟ್ಟು ಹಾಕಿರಿ, ಎನ್ನುವ ಹೊರತು ಬೇರೇನೂ ಆಗಿರಲಿಲ್ಲ. ಆಗ ಅಲ್ಲಾಹನು ಇಬ್ರಾಹೀಮರನ್ನು ಬೆಂಕಿಯಿಂದ ರಕ್ಷಿಸಿದನು." (ಕುರ್‌ಆನ್ 29:24) ಆದರೆ ಅಲ್ಲಾಹನ ಮಾತಿಗೆ ವ್ಯತಿರಿಕ್ತವಾಗಿ ಮೌಲೀದ್‌ನಲ್ಲಿ ಬರೆದಿರುವ ಸುಳ್ಳನ್ನು ನೋಡಿರಿ:

"ಪ್ರವಾದಿ(ಸ)ರ ಪ್ರಕಾಶದಿಂದಾಗಿ ಇಬ್ರಾಹೀಮ್(ಅ) ಜ್ವಲಿಸುತ್ತಿದ್ದ ಬೆಂಕಿಯಿಂದ ಪಾರಾದರು." (ಶರ್‌ಫಲ್ ಅನಾಮ್ ಮೌಲೀದ್) ಇಬ್ರಾಹೀಮ್(ಅ)ರನ್ನು ಬೆಂಕಿಗೆ ಎಸೆಯಲ್ಪಟ್ಟಾಗ ಪ್ರವಾದಿ ಮುಹಮ್ಮದ್(ಸ)ರು ಅವರ ಬೆನ್ನಿನಲ್ಲಿದ್ದುದರಿಂದ ಬೆಂಕಿ ತಣ್ಣಗಾಯಿತು". (ಮಂಕೂಸ್ ಮೌಲೀದ್)

"ಇಬ್ರಾಹೀಮ್(ಅ)ರನ್ನು ಬೆಂಕಿಗೆಸೆದಾಗ ಅಲ್ಲಾಹನು ಪ್ರವಾದಿ ಮುಹಮ್ಮದ್ (ಸ)ರನ್ನು ಇಬ್ರಾಹೀಮ್‌ರ ಬೆನ್ನಿನಲ್ಲಿ ನಿಕ್ಷೇಪಿಸಿದನು". (ಶರ್‌ಫಲ್ ಅನಾಮ್ ಮೌಲೀದ್)

"ಇಬ್ರಾಹೀಮ್(ಅ)ರ ಬೆನ್ನಿನಲ್ಲಿ ಪ್ರವಾದಿ (ಸ)ರ ಪ್ರಕಾಶವಿತ್ತು. ಹಾಗಾಗಿ ಬೆಂಕಿಯು ತಣ್ಣಗಾಗಿಯೂ ಸುರಕ್ಷಿತವಾಗಿಯೂ ಪರಿವರ್ತನೆಗೊಂಡಿತು." (ಸುಬ್‌ಹಾನ ಮೌಲೀದ್)

ಇದೇ ರೀತಿ ಪ್ರವಾದಿ ಲೂತ್(ಅ), ಪ್ರವಾದಿ ಇಸ್ಹಾಖ್(ಅ), ಪ್ರವಾದಿ ಯಅ್‌ಕೂಬ್(ಅ), ಪ್ರವಾದಿ ಯೂಸುಫ್(ಅ), ಪ್ರವಾದಿ ದಾವೂದ್(ಅ), ಪ್ರವಾದಿ ಸುಲೈಮಾನ್(ಅ), ಪ್ರವಾದಿ ಅಯ್ಯೂಬ್(ಅ), ಪ್ರವಾದಿ ಯೂನುಸ್(ಅ), ಪ್ರವಾದಿ ಈಸಾ(ಅ) ಮೊದಲಾದ ಎಲ್ಲಾ ಪ್ರವಾದಿಗಳು ದುರಂತಗಳಿಂದ ಪಾರಾದದ್ದು ಪ್ರವಾದಿ ಮುಹಮ್ಮದ್(ಸ)ರ ಕಾರಣದಿಂದಾಗಿದೆ. (ಶರ್‌ಫಲ್ ಅನಾಮ್ ಮೌಲೀದ್) ಎಂದು ಮೌಲೀದ್‌ಗಳಲ್ಲಿ ಬರೆಯಲಾಗಿದೆ. ಇದು ಆ ಎಲ್ಲಾ ಪ್ರವಾದಿಗಳನ್ನು ವಿಪತ್ತುಗಳಿಂದ ರಕ್ಷಿಸಿದ್ದು ತಾನೆಂದು ದಿವ್ಯ ಕುರ್‌ಆನ್‌ನಲ್ಲಿ ಅಲ್ಲಾಹನು ಹೇಳಿದ್ದಕ್ಕೆ ತದ್ವಿರುದ್ಧವಾಗಿದೆ. ಮಾತ್ರವಲ್ಲ, ಕುರ್‌ಆನ್‌ನ ಅವಮಾನವಾಗಿದೆ. ಸ್ವಾರಸ್ಯವೆಂದರೆ ಮೌಲೀದ್‌ಗಳಲ್ಲಿ ಹೇಳಿರುವುದನ್ನು ತರೀಖತ್‌ವಾದಿಗಳಾದ ಸೂಫೀ ಪಂಥೀ.ಯರು ಒಪ್ಪುವುದಿಲ್ಲ. ಅವರ ಪ್ರಕಾರ ಪ್ರವಾದಿಗಳೆಲ್ಲರೂ ದುರಂತದಿಂದ ಪಾರಾದದ್ದು ಅಲ್ಲಾಹನಲ್ಲಿ ಪ್ರಾರ್ಥಿಸಿಯೂ ಅಲ್ಲ. ಪ್ರವಾದಿ(ಸ)ರ ಕಾರಣದಿಂದಲೂ ಅಲ್ಲ, ಬದಲಾಗಿ ಆ ಪ್ರವಾದಿಗಳು ರಕ್ಷಿಸಲ್ಪಟ್ಟದ್ದು ಮುಹಿಯ್ಯುದ್ದೀನ್ ಶೈಖ್‌ರವರ ಕೃಪಾಕಟಾಕ್ಷದಿಂದಾಗಿದೆ. ಅಲ್ ಹಾಜ್ ಇಸ್ಮಾಈಲ್ ಎಂಬೊಬ್ಬ ಸೂಫಿ ಬರೆಯುವುದನ್ನು ನೋಡಿರಿ:

"ಮುಹಿಯ್ಯುದ್ದೀನ್ ಶೇಖ್ ಹೇಳುತ್ತಾರೆ: "ಇಬ್ರಾಹೀಮ್‌ರವರು ಅಗ್ನಿಕುಂಡದಲ್ಲಿದ್ದಾಗ ಅವರೊಂದಿಗೆ ನಾನಿದ್ದೆ. ಆ ಬೆಂಕಿ ತಣ್ಣಗಾದದ್ದು ನನ್ನ ಆಜ್ಞೆಯಿಂದಾಗಿದೆ. ಇಸ್ಮಾಈಲ್(ಅ)ರನ್ನು ಬಲಿಗೊಡಲು ಕೊಂಡೊಯ್ಯುವಾಗ ನಾನಿದ್ದೆ. ಅಲ್ಲಿಗೆ ಆಡು ಇಳಿದು ಬಂದದ್ದು ನನ್ನ ಫತ್ವಾದಿಂದಾಗಿದೆ. ಯಅ್‌ಕೂಬ್(ಅ)ರವರು ದೃಷ್ಟಿಹೀನರಾದಾಗ ಅವರೊಂದಿಗೆ ನಾನಿದ್ದೆ. ನನ್ನ ಎಂಜಲು ಸವರಿ ಅವರಿಗೆ ದೃಷ್ಟಿ ಬಂದದ್ದಾಗಿದೆ. ಇದ್ರೀಸ್(ಅ) ಬಾನ ಲೋಕಕ್ಕೇರಿದಾಗಲೂ ನಾನಿದ್ದೆ. ನನ್ನ ಸ್ವರ್ಗಗಳ ಪೈಕಿ ಉತ್ತಮವಾದ ಫಿರ್‌ದೌಸ್‌ನಲ್ಲಿ ನಾನವರನ್ನು ಕುಳ್ಳಿರಿಸಿದೆ. ಮೂಸಾ(ಅ) ಅಲ್ಲಾಹನೊಂದಿಗೆ ಮಾತನಾಡುವಾಗಲೂ ನಾನಿದ್ದೆ. ಅವರ ಬೆತ್ತವು ನನ್ನ ಬೆತ್ತದಿಂದ ತುಂಡರಿಸಿದ್ದಾಗಿದೆ. ಅಯ್ಯೂಬ್(ಅ)ರನ್ನು ಪರೀಕ್ಷಿಸಲ್ಪಟ್ಟಾಗಲೂ ನಾನಿದ್ದೆ. ಅವರ ಸಂಕಷ್ಟಗಳು ದೂರಾದದ್ದು ನನ್ನ ಅದೇಶದಿಂದಾಗಿದೆ. ಈಸಾ(ಅ) ತೊಟ್ಟಿಲಲ್ಲಿ ಮಾತನಾಡುವಾಗ ಅವರೊಂದಿಗೆ ನಾನಿದ್ದೆ. ದಾವೂದ್(ಅ)ರಿಗೆ ಸುಖ ಸೌಭಾಗ್ಯಗಳನ್ನು ನಾನು ಕರುಣಿಸಿದೆ" (ಅಲ್‌ಫುಯೂದಾತುರ್ರಬ್ಬಾನಿಯ್ಯ, ಪುಟ: 60, 61).

ಮನೆ ಮನೆಯಲ್ಲಿ ಮೌಲೀದ್, ರಾತೀಬ್ ಹಾಡಿ ಹೊಟ್ಟೆ ಬಿರಿಯುವ ತನಕ ತಿಂದು ತೇಗಿ ಜೇಬು ತುಂಬಾ ಮೌಲೀದ್‌ನ ಹಣ ತುರುಕುವ ಮುಸ್ಲಿಯಾರ್‌ಗಳೇ, ಈ ಮೂರರಲ್ಲಿ ಯಾವುದು ಸರಿ? ದಿವ್ಯ ಕುರ್‌ಆನಿನಲ್ಲಿ ಅಲ್ಲಾಹನು ಹೇಳಿದ್ದೋ, ಮೌಲೀದ್‌ಗಳಲ್ಲಿ ಯಹೂದಿಗಳು ಹೇಳಿದ್ದೋ, ಮುಹಿಯ್ಯುದ್ದೀನ್ ಮಾಲೆ ಮತ್ತು ರಾತೀಬ್‌ನಲ್ಲಿ ಸೂಫಿಗಳು ಹೇಳಿದ್ದೋ? ನಿಮಗೆ ಅಲ್ಲಾಹನಲ್ಲೂ, ಅವನ ಕುರ್‌ಆನಿನಲ್ಲೂ ವಿಶ್ವಾಸವಿದ್ದರೆ ಯಾವುದು ಸರಿಯೆಂದು ಬಹಿರಂಗಪಡಿಸಿ. ಸೃಷ್ಟಿಕರ್ತನೂ, ಸಂರಕ್ಷಕನೂ, ಸರ್ವಲೋಕ ಪರಿಪಾಲಕನೂ ಆದ ಅಲ್ಲಾಹನನ್ನೂ ಅವನ ಪವಿತ್ರ ಗ್ರಂಥವನ್ನೂ ಹೀನಾಯವಾಗಿ ಅವಮಾನಿಸಿ, ಪ್ರವಾದಿ ಮುಹಮ್ಮದ್ (ಸ)ರನ್ನು ಅಲ್ಲಾಹನಿಗಿಂತಲೂ ಶ್ರೇಷ್ಠರನ್ನಾಗಿ ಚಿತ್ರೀಕರಿಸಿದ ಮೌಲೀದ್‌ಗಳು ಮತ್ತು ಮುಹಿಯ್ಯುದ್ದೀನ್ ಶೈಖ್‌ರನ್ನು ಅಲ್ಲಾಹನಿಗಿಂತಲೂ, ಅಲ್ಲಾಹನ ಸಂದೇಶವಾಹಕ(ಸ)ರನ್ನು ಅಲ್ಲಾಹನಿಗಿಂತಲೂ ಶ್ರೇಷ್ಟ ವ್ಯಕ್ತಿಯಾಗಿ ಚಿತ್ರೀಕರಿಸಿದ ರಾತೀಬ್‌ಗಳು ಇಸ್ಲಾಮಿನ ಅಸ್ತಿತ್ವವನ್ನೇ ಬುಡಮೇಲು ಮಾಡುವ ದುರುದ್ದೇಶದಿಂದ ಯಹೂದಿಗಳು ರಚಿಸಿದ ಕ್ಷುದ್ರ ಕೃತಿಗಳಾಗಿದ್ದು, ಈ ಮೌಲೀದ್, ರಾತೀಬ್‌ಗಳು ಸತ್ಯವೆಂದು ನಂಬಿ, ಶುದ್ಧ ಕುಫ್ರಿಯತನ್ನು ಪ್ರತಿಪಾದಿಸುವ ಈ ಮೌಲೀದ್, ರಾತೀಬನ್ನು ಬರ್ಕತ್‌ಗಾಗಿ ಆಚರಿಸುವ ಕುರಾಫಿಗಳು ಅಲ್ಲಾಹು ಮತ್ತು ಅವನ ಸಂದೇಶವಾಹಕರು ಮತ್ತು ಕುರ್‌ಆನನ್ನು ಅನುಸರಿಸುವ ನೈಜ ಮುಸಲ್ಮಾನರಾಗಲು ಸಾಧ್ಯವಿಲ್ಲವೆಂಬ ವಾಸ್ತವಿಕತೆಯನ್ನು ಸಮುದಾಯ ಮನಗಾಣ

(8ನೇ ಪುಟಕ್ಕೆ)

# ಧರ್ಮನಿಷ್ಠ ಖಲೀಫರು

✍ ಅಹ್ಮದ್ ಅನ್ಸಾರ್,
ಮಂಗಳೂರು

(ಕಳೆದ ಸಂಚಿಕೆಯಿಂದ)

## ಇರಾಕಿನ ದಂಡಯಾತ್ರೆ (ಪರ್ಶಿಯನ್ ಚಕ್ರಾಧಿಪತ್ಯ):

ಆ ಕಾಲದಲ್ಲಿ ಪರ್ಶಿಯನ್ ಚಕ್ರಾಧಿಪತ್ಯದಲ್ಲಿ ಬಹಳಷ್ಟು ಗೊಂದಲವಿತ್ತು. ಪರ್ಶಿಯನ್ ಗೋತ್ರದ ಯರ್ಝ್‌ದ್‌ಗ್ರಿಡ್ ಎಂಬ ಬಾಲಕನು ಪುರಾನ್ ದುಖ್‌ತ್ ಎಂಬ ಮಹಿಳೆಯ ಮೇಲ್ವಿಚಾರಣೆಯಲ್ಲಿ ಪರ್ಶಿಯನ್ ಚಕ್ರಾಧಿಪತ್ಯವನ್ನು ಆಳುತ್ತಿದ್ದನು. ಇಸ್ಲಾಮನ್ನು ತಲೆಎತ್ತದಂತೆ ಮಾಡಲಿಕ್ಕಾಗಿ ಪರ್ಶಿಯನರು ಬೆಹರೈನ್‌ನ ವಿರೋಧಿಗಳಿಗೆ ಸಹಾಯ ಮಾಡುತ್ತಿದ್ದರು. ಕೆಲವು ಅರಬ್ ಗೋತ್ರದವರು ಗಡಿಯಲ್ಲಿ ವಾಸಿಸುತ್ತಿದ್ದರು. ಕೆಲವು ಗೋತ್ರದವರು ಇಸ್ಲಾಮ್ ಸ್ವೀಕರಿಸಿದ್ದರು. ಉಳಿದವರು ಕ್ರಿಶ್ಚಿಯನರು. ಗಡಿ ಪ್ರದೇಶದ ನಾಯಕನಾಗಿದ್ದ ಮುತಾನ್ನ ಇಸ್ಲಾಮ್ ಸ್ವೀಕರಿಸಿದ್ದನು.

ಗಡಿ ಪ್ರದೇಶದ ಇರಾಕಿಯನ್ನರು ಅರಬರನ್ನು ಪ್ರಮುಖ ಗುರಿಯಾಗಿಸಿ ಹಿಂಸಿಸುತ್ತಿದ್ದರು. ಮುತಾನ್ನ ಮತ್ತು ಆತನ ಸಂಗಡಿಗರು ಪರ್ಶಿಯನರ ಒಳ ಜಗಳದ ಪ್ರಯೋಜನ ಪಡೆದು ಚಿಕ್ಕ ಪುಟ್ಟ ಯುದ್ಧವನ್ನಾರಂಭಿಸಿದರು. ಪರ್ಶಿಯನರು ಪೂರ್ಣ ಪ್ರಮಾಣದ ಯುದ್ಧವನ್ನು ಪ್ರಾರಂಭಿಸದಿರಲಿಕ್ಕಾಗಿ ಮುತಾನ್ನ ಈ ಯೋಜನೆ ಹಾಕಿಕೊಂಡಿದ್ದ. ಅಬೂಬಕರ್(ರ)ರವರು ಮುತಾನ್ನನ ಯೋಜನೆಯಂತೆ ಯುದ್ಧಕ್ಕೆ ಅನುಮತಿ ಕೊಟ್ಟರು. ಆ ಬಳಿಕ ಮುತಾನ್ನ ಅಬೂಬಕರ್‌ರವರ ಬಳಿ ಬಂದು ಪೂರ್ಣ ಪ್ರಮಾಣದ ಯುದ್ಧಕ್ಕೆ ಅನುಮತಿ ಕೇಳಿದ. ಏಕೆಂದರೆ ಮುಸ್ಲಿಮರಿಗೆ ಪರ್ಶಿಯನರಿಂದ ಅಪಾಯವಿತ್ತು. ಮಾತ್ರವಲ್ಲ, ಬಹರೈನ್‌ನ ವಿದ್ರೋಹಿಗಳಿಗೆ ಪರ್ಶಿಯನರು ಸಹಾಯ ಮಾಡುತ್ತಿದ್ದುದರಿಂದ ಅವರನ್ನು ಸಂಪೂರ್ಣವಾಗಿ ದಮನಿಸಬೇಕಾದ ಅಗತ್ಯವಿತ್ತು. ಅಬೂಬಕರ್(ರ)ರವರು ಶೂರಾ (ಸಲಹಾ ಮಂಡಳಿ)ದ ಅನುಮತಿ ಪಡೆದು ಪೂರ್ಣ ಪ್ರಮಾಣದ ಯುದ್ಧಕ್ಕಿಂತ ಮೊದಲು ಪರ್ಶಿಯನರನ್ನು ಆತ್ಮೀಯವಾಗಿ ಇಸ್ಲಾಮಿಗೆ ಆಹ್ವಾನಿಸಿದರು. ಮುತಾನ್ನನಿಗೆ ಹೆಚ್ಚಿನ ಅನುಭವವಿಲ್ಲದ್ದರಿಂದ ಅಬೂಬಕರ್(ರ)ರವರು ತನ್ನ ಪ್ರಧಾನ ಸೇನಾಧಿಪತಿ ಖಾಲಿದ್‌ಬ್‌ನು ವಲೀದ್ (ರ)ರನ್ನು ಕರೆದು ಮುತಾನ್ನನ ಸೈನ್ಯವನ್ನು ಬಲ ಪಡಿಸುವಂತೆ ಆಜ್ಞಾಪಿಸಿದರು. ಇದು ಹಿಜ್ರಾ 12ರ ಪ್ರಥಮ ತಿಂಗಳಲ್ಲಾಗಿತ್ತು. ಖಾಲಿದ್‌ಬ್ ನು ವಲೀದ್(ರ)ರವರು ಉಬುಲ್ಲಾ ಎಂಬಲ್ಲಿ ಮುತಾನ್ನನ ಸೈನ್ಯವನ್ನು ಭೇಟಿಯಾದರು.

## ಸಂಕೋಲೆಗಳ ಯುದ್ಧ:

ಹಾಫಿರ್ ಎಂಬ ಸ್ಥಳದಲ್ಲಿ ಮುಸ್ಲಿಮರು ಮತ್ತು ಪರ್ಶಿಯನರೊಂದಿಗೆ ಮೊದಲ ಯುದ್ಧ




ನಡೆಯಿತು. ಹುರ್ಮುರ್ಝ್ ಎಂಬ ಪ್ರಖ್ಯಾತ ಸೇನಾಧಿಪತಿಯ ನೇತೃತ್ವದಲ್ಲಿ ಪರ್ಶಿಯನರು ಒಂದುಗೂಡಿದರು. ಇಸ್ಲಾಮಿನ ಕಾರ್ಯ ಸೂಚಿಯಂತೆ ಮತ್ತು ಖಲೀಫರ ಉಪದೇಶದಂತೆ ಖಾಲಿದ್‌ಬ್‌ನು ವಲೀದ್(ರ)ರವರು ಪರ್ಶಿಯನ್ನರನ್ನು ಇಸ್ಲಾಮಿಗೆ ಆಹ್ವಾನಿಸುತ್ತಾ ಈ ರೀತಿ ಪತ್ರ ಬರೆಯುತ್ತಾರೆ: "ನಾವು ನಿಮಗೆ ಅಲ್ಲಾಹನ ಸಂದೇಶವನ್ನು ತಂದಿದ್ದೇವೆ. ಅದುವೇ ಇಸ್ಲಾಮ್. ನಮ್ಮ ಉದ್ದೇಶ ನಿಮ್ಮೊಂದಿಗೆ ಯುದ್ಧ ಮಾಡುವುದಲ್ಲ, ನಿಮಗೆ ಶಾಶ್ವತ ಸುಖದ ಮಾರ್ಗವನ್ನು ತೋರಿಸಿ ಕೊಡುವುದೇ ನಮ್ಮ ಉದ್ದೇಶ. ಆದ್ದರಿಂದ ನೀವು ಇಸ್ಲಾಮನ್ನು ಸ್ವೀಕರಿಸಿರಿ. ಇದರಲ್ಲಿ ನಿಮಗೆ ಸುರಕ್ಷೆಯಿದೆ. ನೀವು ಇಸ್ಲಾಮನ್ನು ಸ್ವೀಕರಿಸದಿದ್ದರೆ ಖಲೀಫರಿಗೆ "ಜಿಝ್ಯಿಯ" ಪಾವತಿಸಬೇಕು. ಎರಡರಲ್ಲೊಂದು ಶರತ್ತನ್ನು ನೀವು ಒಪ್ಪದಿದ್ದಲ್ಲಿ ನಿಮಗೆ ಖಡ್ಗದಿಂದ ಉತ್ತರಿಸಬೇಕಾದೀತು. ಮೂರನೆಯದಾದ ತೀರ್ಮಾನವನ್ನು ನೀವು ಕೈಗೊಳ್ಳುವುದಾದರೆ ನೆನಪಿರಲಿ. ನಿಮ್ಮ ಬಳಿಗೆ ನಾನು ತಂದಿರುವ ಈ ಸಮುದಾಯವು ಮೃತ್ಯುವನ್ನು ಇಷ್ಟ ಪಡುವವರಾಗಿದ್ದಾರೆ. ಆದರೆ ನೀವು ಐಹಿಕ ಜೀವನವನ್ನು ಇಷ್ಟ ಪಡುವರಾಗಿದ್ದೀರಿ. ಅಲ್ಲಾಹನ ಮಾರ್ಗದಲ್ಲಿ ಮೃತ್ಯುವಶವಾಗುವುದನ್ನು ಮುಸ್ಲಿಮರು ಇಷ್ಟ ಪಡುತ್ತಾರೆ. ಮುಸ್ಲಿಮೇತರರು ಲೌಕಿಕ ಜೀವನವನ್ನು ಇಷ್ಟ ಪಡುತ್ತಾರೆ. ಯಾರು ಅಲ್ಲಾಹನ ಮಾರ್ಗದಲ್ಲಿ ಮರಣ ಹೊಂದುತ್ತಾನೋ ಅವನು ಹುತಾತ್ಮ (ಶಹೀದ್)ನಾಗುತ್ತಾನೆ. ಅವನ ರಕ್ತ ಭೂಮಿಗೆ ಬೀಳುವುದಕ್ಕಿಂತ ಮುಂಚೆ ಅವನು ಸ್ವರ್ಗವಾಸಿಯಾಗುತ್ತಾನೆ".

ದುರಹಂಕಾರಿಗಳಾದ ಪರ್ಶಿಯನರು ಖಾಲಿದ್‌ಬ್‌ನು ವಲೀದ್(ರ)ರವರ ಆಹ್ವಾನವನ್ನು ತಿರಸ್ಕರಿಸುತ್ತಾರೆ. ಭೀಕರ ಕಾಳಗದಲ್ಲಿ ಪರ್ಶಿಯನರು ಸರ್ವ ನಾಶವಾಗುತ್ತಾರೆ. ಅವರ ಸೇನಾಧಿಪತಿ ಯುದ್ಧದಲ್ಲಿ ಕೊಲ್ಲಲ್ಪಡುತ್ತಾನೆ. ಯುದ್ಧ ರಂಗದಿಂದ ಯಾರೂ ಓಡಿ ಹೋಗಬಾರದೆಂಬ ಆಜ್ಞೆಯಂತೆ ಪರ್ಶಿಯನ್ ಸೈನಿಕರು ಒಬ್ಬರನ್ನೊಬ್ಬರು ಪರಸ್ಪರ ಸಂಕೋಲೆಗಳಿಂದ ಬಿಗಿದುಕೊಂಡರು. ಹಾಗಾಗಿ ಈ ಯುದ್ಧವನ್ನು ಸಂಕೋಲೆಗಳ ಯುದ್ಧ ಎನ್ನಲಾಗುತ್ತದೆ. ಸಂಕೋಲೆಗಳ ಯುದ್ಧದ ಬಳಿಕ ಮಧಾರ್, ವಾಲಿಜಾ ಮತ್ತು ಉಲ್ಲಿಸ್ ಮುಂತಾದ ಪೂರ್ವ ನಿರ್ಧರಿತವಲ್ಲದ ಕೆಲವು ಯುದ್ಧಗಳು ನಡೆದವು. ಎಲ್ಲಾ ಯುದ್ಧಗಳಲ್ಲೂ ಪರ್ಶಿಯನರು ಸೋಲುಂಡರು. ಮುಸ್ಲಿಮ್ ಸೈನ್ಯದ ಗೆಲುವು ಅವರ ಜನಬಲ ಅಥವಾ ಆಯುಧ ಬಲದಿಂದಾಗಿರಲಿಲ್ಲ. ಅವರ ಈಮಾನ್‌ನ ಬಲದಿಂದಾಗಿತ್ತು.

## ಹಿರಾದ ಪತನ:

ಹಿರಾ ಪರ್ಶಿಯನರ ಪ್ರಮುಖ ತಾಣವಾಗಿತ್ತು. ಖಾಲಿದ್‌ಬ್‌ನು ವಲೀದ್(ರ)ರವರ ನೇತೃತ್ವದ ಮುಸ್ಲಿಮ್ ಸೇನೆ ಹಿರಾ ನಗರಕ್ಕೆ ಮುತ್ತಿಗೆ ಹಾಕಿತು. ಪರ್ಶಿಯನರು ಮೊದಲಿಗೆ ಪ್ರತಿರೋಧ ವ್ಯಕ್ತ ಪಡಿಸಿದರೂ ಬಳಿಕ ಶರಣಾಗತರಾದರು. ಖಾಲಿದ್‌ಬ್‌ನು ವಲೀದ್(ರ) ರವರು ಅವರ ಮೇಲೆ ಜಿಝ್ಯಿಯಾ (ತಲೆ ಗಂದಾಯ) ಹೇರಿದರು. ಆ ಬಳಿಕ ದುಮಾತ್ತಲ್ ಜಿಂದಾಲ್ ಸಹಿತ ಹಲವು ಪ್ರದೇಶಗಳನ್ನು ಮುಸ್ಲಿಮ್ ಸೇನೆ ವಶ ಪಡಿಸಿಕೊಂಡಿತು. ಆ ಪ್ರದೇಶಗಳ ಹಲವಾರು ಅರಬ್ ನಾಯಕರು ಖಾಲಿದ್‌ಬ್‌ನು ವಲೀದ್‌ರಿಗೆ ಶರಣಾದರು. ಖಾಲಿದ್‌ಬ್‌ನು ವಲೀದ್(ರ)ರವರ ನೇತೃತ್ವದ ಕೊನೆಯ ಯುದ್ಧ ಫಿರಾದ್ ಎಂಬಲ್ಲಿ ನಡೆಯಿತು. ಪರ್ಶಿಯನ್ ಅರಬರ ಬಹು ದೊಡ್ಡ ಸೈನ್ಯ ಮತ್ತು ಸಿರಿಯನರು ಪರ್ಶಿಯನರೊಂದಿಗೆ ಸೇರಿಕೊಂಡು ಯುಪ್ರಟಿಸ್ ನದಿಯನ್ನು ದಾಟಿದರು. ಹಿಜ್ರಾ 12ರ ದುಲ್‌ಖಲ್‌ದ್ 15ರಂದು ಭೀಕರ ಯುದ್ಧ ನಡೆಯಿತು. ಧೀರ ಸೇನಾ ನಾಯಕ ಖಾಲಿದ್‌ಬ್‌ನು ವಲೀದ್(ರ) ಶತ್ರು ಸೈನ್ಯವನ್ನು ಹಿಮ್ಮೆಟ್ಟಿಸಿ ಆ ಪ್ರದೇಶವನ್ನು ಸ್ವಾಧೀನ ಪಡಿಸಿದರು. ಈ ವಿಜಯದ ಮೂಲಕ ಮುಸ್ಲಿಮ್ ಸೇನೆ ದಕ್ಷಿಣದ ಎಲ್ಲಾ ಭಾಗಗಳನ್ನು ಮತ್ತು ಉತ್ತರ ಇರಾಕಿನ ಬಹುತೇಕ ಭಾಗಗಳನ್ನು ಗೆದ್ದು ಹಿರಾಕ್ಕೆ ಹಿಂತಿರುಗಿತು.

(ಮುಂದುವರಿಯುವುದು)

## ಓದುಗರ ಗಮನಕ್ಕೆ

ಪವಿತ್ರ ಸಂದೇಶ ಪತ್ರಿಕೆಗೆ ಚಂದಾದಾರರಾಗಲು, ಚಂದಾ ನವೀಕರಿಸಲು ಮತ್ತು ಪತ್ರಿಕೆ ಸರಿಯಾಗಿ ತಲುಪದಿದ್ದರೆ ಈ ಕೆಳಗಿನ ನಂಬರ್‌ನಲ್ಲಿ ಸಂಪರ್ಕಿಸಿರಿ:

**9482946133**

# ಧಾರ್ಮಿಕ ಪ್ರಶ್ನೋತ್ತರಗಳು

## ಮುಷ್ಟಿ ಹಿಡಿದು ಎದ್ದೇಳುವುದು

ಪ್ರ: ಪ್ರವಾದಿ(ಸ)ರವರು ಕೈಮುಷ್ಟಿ ಹಿಡಿದುಕೊಂಡು ಸುಜೂದ್‌ನಿಂದ ಮೇಲೇಳುತ್ತಿದ್ದರು ಎಂದು ಇಮಾಮ್ ನಾಸಿರುದ್ದೀನ್ ಅಲ್ಬಾನಿ(ರ) ಅವರು ಬರೆದ ಪುಸ್ತಕವೊಂದರಲ್ಲಿ ಓದಲು ಸಾಧ್ಯವಾಯಿತು. ಇದು ನಿಜವೇ? ಈ ಬಗ್ಗೆ ವರದಿಯಾದ ಹದೀಸ್ ಸ್ವೀಕಾರ ಯೋಗ್ಯವೇ? ತಿಳಿಸಿ.

ಉ: ಪ್ರವಾದಿ(ಸ)ರವರು ಕೈ ಮುಷ್ಟಿ ಹಿಡಿದುಕೊಂಡು ಸುಜೂದ್‌ನಿಂದ ಎದ್ದೇಳುತ್ತಿದ್ದರು ಎಂಬ ಹದೀಸನ್ನು ಶೈಖ್ ನಾಸಿರುದ್ದೀನ್ ಅಲ್‌ಬಾನಿ ಸಹೀಹ್ ಮಾಡಿದ್ದರೂ ಅನೇಕ ವಿದ್ವಾಂಸರು ಅಲ್ಬಾನಿಯ ಈ ಸಂಶೋಧನೆಯನ್ನು ನಿರಾಕರಿಸುತ್ತಾ ಪ್ರಸ್ತುತ ಹದೀಸ್ ದುರ್ಬಲ ಎಂದಿದ್ದಾರೆ.

ಪ್ರವಾದಿ(ಸ)ರವರ ನಮಾಝ್‌ನ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸುವ ಬಹುತೇಕ ಹದೀಸ್‌ಗಳಲ್ಲಿ ಈ ಬಗ್ಗೆ ವಿವರಣೆ ಇಲ್ಲ. ಇಮಾಮ್ ಇಬ್ನು ಸಲಾಹ್ ವಸೀತ ಎಂಬ ಗ್ರಂಥಕ್ಕೆ ಬರೆದ ಟಿಪ್ಪಣಿಯಲ್ಲಿ ಈ ಹದೀಸ್ ಸ್ವಹೀಹ್ ಅಲ್ಲದ ಕಾರಣ ಇದನ್ನು ಆಧಾರವಾಗಿ ಬಳಸದಂತೆ ಎಚ್ಚರಿಸಿದ್ದಾರೆ. ಇಮಾಮ್ ನವವಿ "ಮುಷ್ಟಿ ಹಿಡಿಯುವ" ಹದೀಸ್‌ನ ಕುರಿತು "ಈ ಹದೀಸ್ ಆಧಾರ ರಹಿತ ಮತ್ತು ದುರ್ಬಲ" ಎಂದು ಪ್ರಸ್ತಾಪಿಸಿದ್ದಾರೆ. (ಮಜ್‌ಮೂಅ್ 3:491)

"ಹಿಟ್ಟು ಕಲಸುವ ರೀತಿ" ಮುಷ್ಟಿ ಹಿಡಿದು ಸುಜೂದ್‌ನಿಂದ ಮೇಲೇಳುವ ಈ ಪದ್ಧತಿಯನ್ನು ಅಜಮಿಗಳು (ಅರಬೇತರ ವರ್ಗ) ರೂಢಿಸಿಕೊಂಡಿದ್ದು ಇದು ಸಹೀಹ್ ಆದ ಹದೀಸ್‌ಗಳಿಗೆ ವಿರುದ್ಧವಾಗಿ ನಮಾಝ್‌ನಲ್ಲಿ ಅಂಗ ವಿನ್ಯಾಸವೊಂದನ್ನು ರೂಪಿಸುವುದಕ್ಕೆ ಸಮಾನ ಎಂದು ವಿದ್ವಾಂಸರು ಆಕ್ಷೇಪಿಸಿದ್ದಾರೆ. ಹೆಚ್ಚಿನ ವಿವರಣೆಗಳಿಗೆ ಶೈಖ್ ರಿಯಾದುಲ್ ಹಕ್ಕ್ ಬರೆದ "ಸಲಾತುಲ್ ಮುಅ್‌ಮಿನಿ ಫಿಲ್ ಕುರ್‌ಆನಿ ವಸ್ಸುನ್ನ" ಎಂಬ ಗ್ರಂಥವನ್ನು ನೋಡಬಹುದು.

ಪ್ರ: ಪ್ರವಾದಿ(ಸ)ರವರ ಜನ್ಮ ದಿನ ಆಚರಿಸುವುದನ್ನು "ಬಿದ್‌ಅತ್" ಎಂದು ಸಲಫಿಗಳು ಕಟುವಾಗಿ ವಿರೋಧಿಸುತ್ತಾರೆ. ಆದರೆ ಅಷ್ಟೇ ತೀವ್ರವಾಗಿ ಮಕ್ಕಳ ಜನ್ಮ ದಿನ ಆಚರಿಸುವುದನ್ನು ಸಲಫಿಗಳು ಏಕೆ ವಿರೋಧಿಸುವುದಿಲ್ಲ ಎಂದು ನನ್ನ ಸುನ್ನಿ ಮಿತ್ರನೊಬ್ಬ ಕೇಳುತ್ತಾನೆ. ಕುರ್‌ಆನ್ ಸುನ್ನತ್ ಪ್ರಕಾರ ಉತ್ತರಿಸಿ.

ಉ: ಇಲ್ಲಿ ಮುಖ್ಯವಾಗಿ ಕೆಲವು ವಿಷಯಗಳನ್ನು ತಿಳಿಯಬೇಕಿದೆ. ಬಿದ್‌ಅತ್ ಎಂದರೆ ಕೇವಲ ಸಂಪ್ರದಾಯ, ರೂಢಿ ಅಲ್ಲ. ಪುಣ್ಯವಿದೆ ಎಂಬ ಉದ್ದೇಶದಿಂದ ಕುರ್‌ಆನ್ ಸುನ್ನತ್ ಮತ್ತು ಸಹಾಬಿಗಳ ನಡೆ-ನುಡಿಗಳಲ್ಲಿ ಆಧಾರವಿಲ್ಲದ ಹೊಸತನ್ನು ಧರ್ಮದ ಭಾಗವಾಗಿ ಆಚರಣೆಗೆ ತರುವುದು. ಪ್ರತಿಯೊಂದು ಬಿದ್‌ಅತ್ ಕೂಡಾ ಪಥಭ್ರಷ್ಟಮಯವಾಗಿದೆ. ಪ್ರವಾದಿ(ಸ)ರವರ ಜನ್ಮ ದಿನವನ್ನು ಅತ್ಯಂತ ಪುಣ್ಯ ಕಾರ್ಯ ಎಂಬ ಮಟ್ಟಿನಲ್ಲಿ ಆಚರಿಸಲಾಗುತ್ತದೆ. ಅದಕ್ಕಾಗಿ ಕುರ್‌ಆನ್ ಸೂಕ್ತಗಳನ್ನೂ, ಹದೀಸ್‌ಗಳನ್ನು ದುರ್ವ್ಯಾಖ್ಯಾನಿಸಿ ಸಮರ್ಥನೆ ನೀಡಲಾಗುತ್ತದೆ. ಮೌಲೀದ್ ಆಚರಿಸಿದ ಮತ್ತು ಆ ಕ್ರಮವನ್ನು ವಿರೋಧಿಸುವವರನ್ನು ನೂತನ ವಾದಿಗಳಾಗಿಯೂ ಪಥಭ್ರಷ್ಟರಾಗಿಯೂ ಚಿತ್ರಿಸಲಾಗುತ್ತದೆ. ಜನರು ಇಂತಹ ಉದ್ದೇಶದಿಂದಲೇ ಪ್ರವಾದಿ(ಸ)ರವರ ಜನ್ಮ ದಿನವನ್ನು ಆಚರಿಸುತ್ತಾರೆ. ಪ್ರವಾದಿ(ಸ)ವರು ಪೂರ್ವ ಪ್ರವಾದಿಗಳ ಜನ್ಮ ದಿನ ಆಚರಿಸಿದ್ದಾಗಿ ಸಾಬೀತಾಗಿದ್ದರೆ ಅಥವಾ ಸಹಾಬಿಗಳು ಪ್ರವಾದಿ(ಸ)ರವರ ಜನ್ಮ ದಿನ ಆಚರಿಸಿದ ಬಗ್ಗೆ ಅಧಿಕೃಕ ಪ್ರಮಾಣವಿದ್ದಿದ್ದರೆ ಸಲಫಿಗಳು ಸುನ್ನಿಗಳಿಗಿಂತ ವೈಭವಯುತವಾಗಿ 'ರಬೀವುಲ್ ಅವ್ವಲ್'ನ್ನು ಕೊಂಡಾಡುತ್ತಿದ್ದರು. ಆದರೆ ಇದಕ್ಕೆ ಯಾವುದೇ ಆಧಾರವಿಲ್ಲದಿರುವುದರಿಂದ ಇದು ಬಿದ್‌ಅತ್ ಎಂಬುದರಲ್ಲಿ ಸಂಶಯವಿಲ್ಲ.

ಇನ್ನು ಮಕ್ಕಳ "ಬರ್ತ್‌ಡೇ" ವಿಷಯ. ಇದು ಪ್ರವಾದಿ(ಸ)ರವರ ಜನ್ಮ ದಿನಾಚರಣೆಗಿಂತ ಸಂಪೂರ್ಣ ಭಿನ್ನ.

ಪುಣ್ಯವಿದೆ ಎಂಬ ಉದ್ದೇಶದಿಂದ ಯಾರೂ ಮಕ್ಕಳ ಜನ್ಮ ದಿನ ಆಚರಿಸುವುದಿಲ್ಲ. ಆದುದರಿಂದ ಇದು ಬಿದ್‌ಅತ್ ಅಲ್ಲದಿದ್ದರೂ ಅನಿಸ್ಲಾಮಿಕ ಸಂಸ್ಕೃತಿ. ಅನ್ಯ ಮತೀಯರ ಹಬ್ಬ-ಹರಿದಿನ ಮುಂತಾದವುಗಳನ್ನು ಅನುಸರಿಸದಂತೆ ಇಸ್ಲಾಮ್ ಆದೇಶಿಸಿದೆ. ಅನ್ಯ ಮತೀಯರ ಸಭೆ ಸಮಾರಂಭದಲ್ಲಿ ದೀಪ ಬೆಳಗುವುದು, ಕೇಕ್ ಕತ್ತರಿಸುವುದು ಇವೆಲ್ಲವೂ ಇಸ್ಲಾಮಿ ಸಂಸ್ಕೃತಿಗೆ ವಿರುದ್ಧವಾದ ಕಾರ್ಯಗಳಾಗಿವೆ. ಇಂತಹ ಆಚರಣೆ ಸಂಸ್ಕೃತಿಗಳಿಂದ ವಿಶ್ವಾಸಿಗಳು ಯಾವತ್ತೂ ದೂರವಿರಬೇಕು.

-ಶೈಖ್ ಮಹ್‌ಮೂದ್ ಅಹ್ಮದ್ ಕಾಶ್ಮೀರಿ

## ಬಾಂಗ್ ಕೇಳಿಸುವಾಗ ತಲೆ ಮುಚ್ಚುವ ಮಹಿಳೆ!

ಪ್ರ: ಮಸೀದಿಯಿಂದ ಅದಾನ್ ಕರೆ ಕೇಳಿಸಿದೊಡನೆ ಮಹಿಳೆಯರು ತಲೆಗೆ ಬಟ್ಟೆ(ಶಿರವಸ್ತ್ರ) ಹಾಕಿಕೊಳ್ಳುತ್ತಾರೆ. ಇದು ಕಡ್ಡಾಯವೇ?

ಉ: ಆದಾನ್ ಕರೆ ಕೇಳಿದೊಡನೆ ಅದೇನೋ ಕಡ್ಡಾಯ ಎಂಬಂತೆ ತಮ್ಮ ಸೀರೆಯ ಸೆರಗು ಅಥವಾ ಶಾಲನ್ನು ತಲೆಗೆ ಹಾಕಿಕೊಂಡು ಕೃತಕ ಭಕ್ತಿ ಪ್ರದರ್ಶಿಸುವುದು ಅನೇಕ ಮಹಿಳೆಯರ ಹವ್ಯಾಸವಾಗಿ ಬಿಟ್ಟಿದೆ. ಈ ಬಗ್ಗೆ ಶೈಖ್ ಸಾಲಿಹ್ ಅಲ್ ಮುನಜ್ಜಿದ್ ಹೇಳುವುದು ನೋಡಿ: "ಅದಾನ್ ಕರೆ ಕೇಳಿಸುವಾಗ ಮಹಿಳೆಯರು ತಲೆ ಮುಚ್ಚಿಕೊಳ್ಳುವುದಕ್ಕೆ ಯಾವುದೇ ಆಧಾರವಿಲ್ಲ. ಅಷ್ಟೇ ಅಲ್ಲ, ಪ್ರತ್ಯೇಕ ಭಕ್ತಿ ಭಾವದಿಂದ ಹಾಗೆ ಮಾಡುವುದು ಬಿದ್‌ಅತ್ ಕೂಡಾ. ಆದಾನ್ ಕರೆ ಕೇಳಿಸುವಾಗ ಮಹಿಳೆ ತಾನಿರುವ (ತಲೆ ಮುಚ್ಚಿಕೊಂಡಿದ್ದರೆ ಮುಚ್ಚಿದ ಸ್ಥಿತಿಯಲ್ಲೂ ತೆರೆದಿದ್ದರೆ ತೆರೆದ ಸ್ಥಿತಿಯಲ್ಲೂ) ಸ್ಥಿತಿಯಲ್ಲೇ ಅದಕ್ಕೆ ಉತ್ತರಿಸಬಹುದು. ಕುರ್‌ಆನ್ ಓದುವಿಕೆ, ದಿಕ್ರ್, ಸಲಾತ್ ಮುಂತಾದವುಗಳಿಗೂ ಇದೇ ವಿಧಿ ಅನ್ವಯ. ಅಂದರೆ ತಲೆ ಮುಚ್ಚುವುದು ಕಡ್ಡಾಯವಿಲ್ಲ.

ಸಮಿ ಅಲ್ಲಾಹು ವಲಿಮನ್ ಹಮಿದಃ ಎಂದು ಹೇಳಬಹುದೇ?

ಪ್ರ: ನಮ್ಮ ಮಸೀದಿಯ ಇಮಾಮ್ ರುಕೂಅ್‌ನಿಂದ ಮೇಲೆ ಏಳುವಾಗ "ಸಮಿ ಅಲ್ಲಾಹು ವಲಿಮನ್‌ಹಮಿದ" ಎಂದು ಹೇಳುತ್ತಾರೆ. ಇಲ್ಲಿ "ವಾವ್" (ವ) ಎಂಬ ಅಕ್ಷರ ಹೆಚ್ಚುವರಿಯಾಗಿ ಸೇರ್ಪಡೆಯಾಗಿರುವುದರಿಂದ ನಮಾಝ್ ಭಂಗವಾಗಲಾರದೇ? ಏನಿದರ ವಿಧಿ?

ಉ: ರುಕೂನಿಂದ ಏಳುವಾಗ ಸಮಿ ಅಲ್ಲಾಹು ಲಿಮನ್ ಹಮೀದಃ ಎಂದು ಹೇಳುವುದು ಪ್ರವಾದಿ(ಸ)ರವರಿಂದ ಸ್ಥಿರಪಟ್ಟ ಸುನ್ನತ್ ಆಗಿದೆ. ಅನೇಕ ಹದೀಸ್‌ಗಳಲ್ಲಿ ಇದು ದಾಖಲಾಗಿದೆ.

ಇಮಾಮ್ ರುಕೂಅ್‌ನಿಂದ ಮೇಲೆ ಏಳುವಾಗ "ಸಮಿ ಅಲ್ಲಾಹ್ ವಲಿಮನ್ ಹಮೀದ" ಎಂದು ಹೇಳುತ್ತಿದ್ದರೆ ಅದರಲ್ಲಿರುವ ಎರಡು ತಪ್ಪುಗಳನ್ನು ಆತನ ಗಮನಕ್ಕೆ ತಂದು ಆತನಿಗೆ ತಿಳಿ ಹೇಳಬೇಕಾದುದು ಸಂಬಂಧ ಪಟ್ಟವರ ಕರ್ತವ್ಯ.

ಇಲ್ಲಿರುವ ಲೋಪವೆಂದರೆ 1. 'ವ' ಅಕ್ಷರವನ್ನು ಸೇರಿಸುವುದರಿಂದ ಪ್ರವಾದಿ(ಸ) ಅವರು ಕಲಿಸಿಕೊಟ್ಟ ವಾಕ್ಯವನ್ನು ಬದಲಿಸಿದಂತಾಗುವುದು. 2. ಆಶಯ ವಿರೂಪಗೊಳ್ಳುವುದು, ಆದರೆ ಹೆಚ್ಚಿನವರು ತಿಳುವಳಿಕೆಯ ಕೊರತೆಯಿಂದಲೇ ಹೀಗೆ ಮಾಡುವುದರಿಂದ ನಮಾಝ್ ಭಂಗವಾಗಲಾರದು.

## ನನ್ನ ಈ ಪ್ರಶ್ನೆಗೆಳಿಗೆ ಉತ್ತರಿಸಿ:

1. ಶುಕ್ರವಾರ ಜುಮುಅ ನಮಾಝಿಗೆ ಮೊದಲು ರವಾತಿಬ್ ನಮಾಝ್ ಮಾಡಬೇಕೆಂದಿದೆಯೇ?

2. ನಮಾಝ್‌ನ ಮಧ್ಯೆ ಸೀನಿದರೆ "ಅಲ್ ಹಮ್ದುಲಿಲ್ಲಾಹ್" ಹೇಳಬಹುದೇ?

3. ಈದ್ ನಮಾಝ್‌ನ ತಕ್‌ಬೀರ್‌ಗಳ ನಡುವೆ ದಿಕ್ರ್ ಹೇಳುವುದರ ವಿಧಿಯೇನು?

**ಝೈನ್ ಬೋಂದೆಲ್**

ಉ: 1. ಝುಹರ್ ನಮಾಝ್‌ನಂತೆ ಶುಕ್ರವಾರ ಜುಮುಅ ನಮಾಝ್‌ಗೆ ಮೊದಲು ರವಾತಿಬ್ ಸುನ್ನತ್ತಿಲ್ಲ.

ಪ್ರವಾದಿ(ಸ)ರವರಾಗಲಿ, ಸಹಾಬಿಗಳಾಗಲಿ, ಜುಮುಅಕ್ಕೆ ಮೊದಲು ರವಾತಿಬ್ ನಮಾಝ್ ನಿರ್ವಹಿಸಿದ್ದಾಗಿ ಅಧಿಕೃತ ವರದಿ ಇಲ್ಲ.

ಜುಮುಅ ಝುಹರ್ ನಮಾಝ್‌ಗಿಂತ ಎಷ್ಟೋ ವಿಷಯಗಳಲ್ಲಿ ಭಿನ್ನ. ಅದೊಂದು ಸ್ವತಂತ್ರ ನಮಾಝ್ ಆದ ಕಾರಣ ಝುಹರ್‌ನೊಂದಿಗೆ ಅದನ್ನು ತಾರತಮ್ಯ ಮಾಡುವಂತಿಲ್ಲ.

ಒಂದು ವೇಳೆ ಜುಮುಅಕ್ಕೆ ಮುನ್ನ ರವಾತಿಬ್ ನಮಾಝ್ ಇದ್ದಿದ್ದರೆ ಪ್ರವಾದಿ(ಸ)ರವರು ಖಂಡಿತವಾಗಿಯೂ ನಮಗೆ ತಿಳಿಸಿ ಕೊಡುತ್ತಿದ್ದರು ಎಂಬುದರಲ್ಲಿ ಸಂಶಯವಿಲ್ಲ. ಜುಮುಅಕ್ಕೆ ಮೊದಲು ಪ್ರವಾದಿ(ಸ)ರವರು ನಾಲ್ಕು ರಕಅತ್ ನಮಾಝ್ ನಿರ್ವಹಿಸುತ್ತಿದ್ದರು ಎಂದು ಇಬ್ನು ಮಸ್‌ಊದ್(ರ)ರವರಿಂದ ವರದಿಯಾದ ಹದೀಸ್ ಸಹೀಹ್ ಅಲ್ಲ.

ಇಮಾಮ್ ಶಾಫಿ, ಮಾಲಿಕ್, ಇಮಾಮ್ ಅಹ್ಮದ್(ರ) ಈ ಮೂರು ಮದ್‌ಹಬ್‌ನ ಇಮಾಮರ ಅಭಿಪ್ರಾಯ ಕೂಡಾ ಜುಮುಅಕ್ಕೆ ಮೊದಲು ರವಾತಿಬ್ ನಮಾಝ್ ಸುನ್ನತ್ ಇಲ್ಲ ಎಂದಾಗಿದೆ.

ಜುಮುಅ ದಿನ ಮಸೀದಿಗೆ ಬಂದವರು ತಹಿಯ್ಯತ್ ನಮಾಝ್ ನಿರ್ವಹಿಸಿ ಖತೀಬರು ಮಿಂಬರ್ ಏರುವ ತನಕ ಕುರ್‌ಆನ್ ಪಾರಾಯಣ, ದಿಕ್ರ್, ಸ್ವಲಾತ್ ಮತ್ತಿತರ ಆರಾಧನೆಗಳಲ್ಲಿ ನಿರತರಾಗಬೇಕು.

ಸುನ್ನಿಗಳು ಶುಕ್ರವಾರದ ಬಿದಈ ಬಾಂಗ್ ಮೊಳಗಿದೊಡನೆ ಎದ್ದು ನಿಂತು ರವಾತಿಬ್ ನಮಾಝ್ ನಿರ್ವಹಿಸಲು ಝುಹರ್‌ನಂತೆ ಜುಮುಅಕ್ಕೆ ಮೊದಲು ಕೂಡಾ ರವಾತಿಬ್ ನಮಾಝ್ ಸುನ್ನತ್ ಇದೆ ಎಂಬ ಆಧಾರ ರಹಿತ ಧೋರಣೆಯೇ ಕಾರಣ.

ಪ್ರವಾದಿ(ಸ)ರವರ ಕಾಲದಲ್ಲಿ ಇದ್ದುದು ಒಂದೇ ಬಾಂಗ್. ಬಿಲಾಲ್(ರ)ರವರು ಬಾಂಗ್ ಕರೆ ಕೊಟ್ಟ ನಂತರ ಪ್ರವಾದಿ(ಸ)ರವರು ಖುತುಬಕ್ಕಾಗಿ ಎದ್ದು ನಿಲ್ಲುತ್ತಿದ್ದರು. ಈ ಸಮಯ ಸಹಾಬಿಗಳು ಎದ್ದು ನಿಂತು ನಮಾಝ್ ಮಾಡುತ್ತಿದ್ದರು ಎಂದು ಯಾರಾದರೂ ವಾದಿಸುವುದಾದರೆ ಅದಕ್ಕಿಂತ ದೊಡ್ಡ ಅಜ್ಞಾನ ಬೇರಿಲ್ಲ ಎಂದೇ ಹೇಳಬೇಕು.

2. ನಮಾಝ್‌ನಲ್ಲಿರುವಾಗ ಸೀನಿದರೆ "ಅಲ್ ಹಮ್ದುಲಿಲ್ಲಾಹ್" ಹೇಳಬೇಕು. ಇದು ಸಹಾಬಿಗಳು ಹಾಗೂ ಬಹುತೇಕ ತಾಬಿಈ ವಿದ್ವಾಂಸರ ಅಭಿಪ್ರಾಯ. ಸಹೀಹ್ ಆದ ಹದೀಸ್‌ನಲ್ಲಿ ಇದಕ್ಕೆ ಸೂಚನೆ ಇದೆ.

3. ಈದ್ ನಮಾಝ್‌ನ ತಕ್‌ಬೀರ್‌ಗಳ ನಡುವೆ ಯಾವುದೇ ಪ್ರತ್ಯೇಕ ದಿಕ್ರ್‌ಗಳು ಅಧಿಕೃತ ಹದೀಸ್‌ಗಳಲ್ಲಿ ವರದಿಯಾಗಿಲ್ಲ. ತಕ್‌ಬೀರ್‌ಗಳ ಮಧ್ಯೆ ಅಲ್ಪ ಸಮಯ ಮೌನ ವಹಿಸುವುದಾಗಿದೆ ಪ್ರವಾದಿ ಚರ್ಯೆ. ತಕ್‌ಬೀರ್‌ಗಳ ಮಧ್ಯೆ ದಿಕ್ರ್ ಹೇಳುವಂತೆ ಸೂಚಿಸುವ ಹದೀಸ್‌ಗಳೆಲ್ಲಾ ದುರ್ಬಲ ಎಂಬುದಾಗಿ ವಿದ್ವಾಂಸರು ಸ್ಪಷ್ಟ ಪಡಿಸಿದ್ದಾರೆ.



# ಪ್ರವಾದಿ ಜನ್ಮ ದಿನಾಚರಣೆ

ಇಸ್ಲಾಮಿನಲ್ಲೊಂದು ಹಬ್ಬವೆಂಬ ರೀತಿಯಲ್ಲಿ, ನಮ್ಮ ನಾಡಿನಲ್ಲಿ ಪ್ರವಾದಿ(ಸ)ರ ಹುಟ್ಟುಹಬ್ಬ (ಮೀಲಾದುನ್ನಬಿ) ಆಚರಿಸಲ್ಪಡುತ್ತಿದೆ. ಮೀಲಾದ್ ಎಂಬ ಪದಕ್ಕೆ ಜನಿಸಿದ ಸ್ಥಳ, ಜನನ ಸಮಯವೆಂದು ಅರ್ಥಗಳಿವೆ. ಇಲ್ಲಿ ಹಬ್ಬವನ್ನು ಅರಬೀ ಕ್ಯಾಲೆಂಡರ್‌ನ ಕಾಲ ಸಂಪ್ರದಾಯದಂತೆ ರಬೀಉಲ್ ಅವ್ವಲ್ ತಿಂಗಳು ಪೂರ್ತಿಯಾಗಿ ಆಚರಿಸಲಾಗುತ್ತದೆ. ಪ್ರವಾದಿ ಮುಹಮ್ಮದ್(ಸ)ರು ರಬೀಉಲ್ ಅವ್ವಲ್ ತಿಂಗಳ 9 ಅಥವಾ 12ರಂದು ಜನಿಸಿದ್ದಾರೆ ಎಂದು ಹೇಳಲಾಗುತ್ತದೆ. ರಬೀಉಲ್ ಅವ್ವಲ್ ತಿಂಗಳ ಇತರ ದಿನಗಳಲ್ಲಿ ಅಥವಾ ರಮದಾನ್ ತಿಂಗಳಲ್ಲಿ ಪ್ರವಾದಿ(ಸ)ರವರು ಜನಿಸಿದ್ದಾರೆಂಬ ಅಭಿಪ್ರಾಯಗಳು ಕೂಡಾ ಇವೆ. ಖಚಿತವಾದ ಪುರಾವೆಗಳ ಕೊರತೆಯೇ ಅಭಿಪ್ರಾಯ ವ್ಯತ್ಯಾಸಗಳಿಗೆ ಕಾರಣ. ಮೀಲಾದುನ್ನಬಿಯ ಉದ್ದೇಶವಿಲ್ಲದೇ ಇರುವುದರಿಂದ ಅವರ(ಸ) ಜನನ ದಿನ ಅಥವಾ ದಿನಾಂಕವನ್ನು ಅಲ್ಲಾಹನು ಮತ್ತು ಅವನ ಪ್ರವಾದಿ(ಸ)ರವರು ತಿಳಿಸಲಿಲ್ಲ.

ಪ್ರವಾದಿ(ಸ)ರವರು ಜನಿಸಿದ ದಿನದಂದು ಮಾತ್ರವೇ ಹಬ್ಬವೆಂದು ಇಲ್ಲಿಯ ಜನ ನಂಬುತ್ತಾರೆ. ಆದರೆ ಅವರು ಜನಿಸಿದ ಸ್ಥಳದಲ್ಲಿ ಆ ಹಬ್ಬವಿಲ್ಲ. ಅವರು ಜನಿಸಿದ ಸ್ಥಳ ಪವಿತ್ರ ಮಕ್ಕಾವಾಗಿದೆ. ಅಲ್ಲಿ ಈ ವರೆಗೆ ಇಂತಹ ಹಬ್ಬವು ಆಚರಿಸಲ್ಪಟ್ಟಿಲ್ಲ, ಹಿಂದೆಂದೂ ಆಚರಿಸಲ್ಪಟ್ಟಿಲ್ಲ. ಹಿಂದೆ ಎಂದರೆ ಪುರಾತನ ಕಾಲದಲ್ಲಿ. "ಅತಿ ಉತ್ತಮ ಶತಮಾನವು ನನ್ನ ಈ ಶತಮಾನವಾಗಿದೆ ಮತ್ತು ಅದರ ನಂತರದಿರುವುದು ಮತ್ತದರ ನಂತರದಿರುವುದು" ಎಂದು ಪ್ರವಾದಿ(ಸ)ರವರು ಹೇಳಿದ ಆ ಮೂರು ಶತಮಾನಗಳಲ್ಲಿ ಮುಸ್ಲಿಮ್ ಜಗತ್ತಿನಲ್ಲೆಲ್ಲೂ ಈ ವಿಧದ ಹಬ್ಬವಿರಲಿಲ್ಲ. ಈ ವಿಷಯವನ್ನು ಅಭಿಪ್ರಾಯ ವ್ಯತ್ಯಾಸವಿಲ್ಲದೇ ಎಲ್ಲರೂ ಸಮ್ಮತಿಸುವರು.

ಇಸ್ಲಾಮ್ ಧರ್ಮ ಪ್ರಚಾರಕ್ಕಾಗಿ ಒಂದು ಲಕ್ಷಕ್ಕಿಂತಲೂ ಅಧಿಕ ಪ್ರವಾದಿಗಳು ನಿಯೋಗಿಸಲ್ಪಟ್ಟಿದ್ದರು. ಅವರಲ್ಲಿ ಬರೀ 25 ಪ್ರವಾದಿಗಳ ನಾಮಗಳು ಮಾತ್ರವೇ ಪವಿತ್ರ ಕುರ್‌ಆನಿನಲ್ಲಿ ಉಲ್ಲೇಖಿಸಲ್ಪಟ್ಟಿದೆ. ನೂಹ್, ಇಬ್ರಾಹೀಮ್, ಮೂಸಾ ಸುಲೈಮಾನ(ಅ) ಮೊದಲಾದವರ ಧರ್ಮ ಕಾರ್ಯಗಳನ್ನು ಕುರ್‌ಆನ್ ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದೆ. ಆದರೆ ಯಾರ ಜನ್ಮ ದಿನದ ಕುರಿತಾಗಲಿ, ಮರಣ ದಿನದ ಕುರಿತಾಗಲಿ ಪ್ರಸ್ತಾಪಿಸಿಲ್ಲ. ಆ ರೀತಿ ಯಾವ ಕಾಲದಲ್ಲಾದರೂ, ಒಂದು ಜನ್ಮ ದಿನಾಚರಣೆ ನಡೆದಿದೆಯೆಂದಾಗಲಿ, ನಡೆಸಬೇಕೆಂದಾಗಲಿ, ಕುರ್‌ಆನ್ ಹೇಳಲಿಲ್ಲ. ಪ್ರವಾದಿಗಳ ಜನ್ಮ ದಿನಗಳನ್ನು ಮತ್ತು ಜನ್ಮ ಸ್ಥಳಗಳನ್ನು ಕುರ್‌ಆನ್ ಪೂರ್ತಿಯಾಗಿ ಅವಗಣಿಸಿದೆ.

ಧಾರ್ಮಿಕ ಅಥವಾ ರಾಷ್ಟ್ರೀಯ ಹಬ್ಬಗಳು ಹೇಗೆ ರೂಪಗೊಳ್ಳಬೇಕೆಂಬುದನ್ನು ನಾವು ತಿಳಿದಿರಬೇಕು. ಹಬ್ಬಗಳಿಗೆ ಪ್ರಾಧಿಕಾರ (Authority) ಅನಿವಾರ್ಯವಾಗಿದೆ. ಧಾರ್ಮಿಕ ಹಬ್ಬಗಳಾದರೆ, ಧಾರ್ಮಿಕ ಗ್ರಂಥಗಳು ಆಧಾರವಾಗುತ್ತವೆ. ಇಸ್ಲಾಮಿನಲ್ಲಿ ಕುರ್‌ಆನ್ ಮತ್ತು ಸುನ್ನತ್‌ಗಳು ಅಧಿಕೃತ ಆಧಾರಗಳಾಗಿವೆ. ಅವೆರಡರಲ್ಲೂ ಜನ್ಮ ದಿನಾಚರಣೆಯ ಬಗ್ಗೆ ಯಾವ ಸೂಚನೆಯೂ ಇಲ್ಲ. ಆದುದರಿಂದ ಮೀಲಾದುನ್ನಬಿ ಆಚರಣೆಗೆ ಧಾರ್ಮಿಕವಾಗಿ ಯಾವ ಆಧಾರವೂ ಇಲ್ಲವೆಂದು ಸ್ಪಷ್ಟವಾಗುತ್ತದೆ.

ಒಂದು ಹಬ್ಬವನ್ನು ನಿರ್ಣಯಿಸುವಾಗ, ಅದಕ್ಕೆ ಸಮೂಹ ಅಥವಾ ರಾಷ್ಟ್ರ ಯಾವುದಾದರೂ ಒಂದು ನಿಶ್ಚಿತ ರೂಪ ಮತ್ತು ಸ್ವಭಾವವನ್ನು ನಿರ್ಣಯಿಸಬೇಕಾಗಿದೆ. ಹಬ್ಬಗಳು ಆಚರಿಸುವವರ ಇಂಗಿತಗಳಿಗೆ ಅನುಸಾರವಾಗಿ ನಡೆದುಕೊಳ್ಳಲಿ ಎಂದು ನಿರ್ಧರಿಸಲು ಸಾಧ್ಯವಿಲ್ಲ. ಉದಾಹರಣೆಗೆ ನಮ್ಮ ಸ್ವಾತಂತ್ರ್ಯ ದಿನಾಚರಣೆ, ರಾಷ್ಟ್ರ ನಿಶ್ಚಯಿಸಿದ ಒಂದು ಹಬ್ಬ. ಧ್ವಜವನ್ನು ಹಾರಿಸುವುದು, ಗೌರವಿಸುವುದು, ರಾಷ್ಟ್ರ ಗೀತೆ ಹಾಡುವುದು ಇತ್ಯಾದಿ ಕ್ರಮಗಳಿವೆ. ಅವುಗಳಿಗೆಲ್ಲಾ ನಿಶ್ಚಿತ ರೂಪ, ಸ್ವಭಾವ ಮತ್ತು ಸಮಯಗಳಿವೆ. ಆ ನಿಯಮಗಳನ್ನು ಪಾಲಿಸಿಯೇ ತೀರಬೇಕು. "ಒಳ್ಳೆಯದಲ್ಲವೇ" ಎಂಬ ಗ್ರಹಿಕೆಯಲ್ಲಿ ಬೇರೇನನ್ನೂ ಮಾಡಕೂಡದು. ಧ್ವಜವನ್ನು ಏರಿಸುವ ಸಮಯದಲ್ಲೇ ಏರಿಸಬೇಕು. ಇಳಿಸುವ ಸಮಯದಲ್ಲಿಯೇ ಇಳಿಸಬೇಕು. "ರಾಷ್ಟ್ರೀಯ ಧ್ವಜವಲ್ಲವೇ, ಹಾರಲಿ" ಎಂದು ಯಾವಾಗಲೂ ಧ್ವಜವನ್ನು ಹಾರಿಸಲು ಸಾಧ್ಯವಿಲ್ಲ.

ಮುಸ್ಲಿಮರಿಗೆ ಕುರ್‌ಆನ್ ಮತ್ತು ಸುನ್ನತ್‌ಗಳಲ್ಲಿ ಎರಡು ಹಬ್ಬಗಳು ಮಾತ್ರವೇ ನಿಶ್ಚಯಿಸಲ್ಪಟ್ಟಿವೆ. ಅವುಗಳನ್ನು ಹೇಗೆ ಆಚರಿಸಬೇಕೆಂಬುದಕ್ಕೆ ನಿಶ್ಚಿತ ರೂಪ ರೇಖೆಗಳಿವೆ. ತಕ್ಬೀರನ್ನು ಹೇಳುವುದು, ಈದ್ಗಾದಲ್ಲಿ ಸಾಮೂಹಿಕ ಪ್ರಾರ್ಥನೆ, ಸ್ನಾನ, ವಸ್ತ್ರಧಾರಣೆ, ಸುಗಂಧ, ನಡೆದುಕೊಂಡು ಹೋಗುವ ರೀತಿ, ಬಲಿ ಇತ್ಯಾದಿ. ಹಬ್ಬದ ಹಿರಿಯ ಕಿರಿಯ ಕಾರ್ಯಗಳಿಗೆ ನಿರ್ದಿಷ್ಟ ರೂಪ, ಭಾವ ಗಳು ಇವೆ. ಅವುಗಳನ್ನು ಅದೇ ರೀತಿಯಲ್ಲಿ ಅನುಸರಿಸಬೇಕು. ಅವುಗಳನ್ನು ಬದಲಾಯಿಸಲು ಯಾರಿಗೂ ಅಧಿಕಾರವಿಲ್ಲ.

ಆದರೆ ಇಲ್ಲಿ ಆಚರಿಸಲ್ಪಡುವ ಮೀಲಾದುನ್ನಬಿ ಆಚರಣೆಯನ್ನು ನೋಡಿ. ಯಾರಿಗೆ ಇದರ ಬಗ್ಗೆ ದೃಢತೆ ಇದೆ. ಮದ್‌ಹ್(ಹೊಗಳು ವಿಕೆ) ಎಂದು ಹೇಳಿ ಕೆಲವರು ಹಾಡುಗಳನ್ನು ಹಾಡುತ್ತಾರೆ. ಕೆಲವರು ಪತಾಕೆಯನ್ನು ಹಿಡಿದುಕೊಂಡು ಮೆರವಣಿಗೆ ಹೋಗುತ್ತಾರೆ. ಅನ್ನದಾನ ಮಾಡುತ್ತಾರೆ. ವಾಹನಗಳು ಮತ್ತು ಅಂಗಡಿಗಳನ್ನು ಅಲಂಕರಿಸುತ್ತಾರೆ. ಬೊಬ್ಬಿಟ್ಟು ಸಲಾತ್ ಹೇಳುತ್ತಾರೆ.

ವಿಧಿಸ್ಸ ಆಚರಣೆ ಯಾವುದಕ್ಕೆ ಪ್ರಾಮುಖ್ಯತೆ? ಏನು ಪುಣ್ಯ? ಯಾವುದನ್ನು ಉಪೇಕ್ಷಿಸಬಹುದು? ಇನ್ನೊಂದು ಕರ್ಮವನ್ನು ಅದರೊಟ್ಟಿಗೆ ಸೇರಿಸಿದರೆ ತಪ್ಪಾಗುವುದೇ?!

ಏನನ್ನು ಸೇರಿಸಬಹುದು? ಏನನ್ನು ಬಿಟ್ಟು ಬಿಡಬಹುದು?!

ಸ್ನಾನ ಮಾಡಬೇಕೇ? ಒಳ್ಳೆಯ ಬಟ್ಟೆಯನ್ನು ಧರಿಸಬೇಕೇ? ಸುಗಂಧವನ್ನು ಉಪಯೋಗಿಸಬೇಕೇ? ಪ್ರತ್ಯೇಕ ಪ್ರಾರ್ಥನೆ ಇದೆಯೇ?!

ಈ ಬಗ್ಗೆ ಯಾರಿಗೂ ನಿಶ್ಚಿತ ಅರಿವಿಲ್ಲ. ಹೀಗೆ ಅನಿಶ್ಚಿತ ವಾತಾವರಣ. ಒಟ್ಟಿನಲ್ಲಿ ಏನೂ ತಿಳಿಯದು. ಮೀಲಾದುನ್ನಬಿ ಎಂಬ ಆಚರಣೆಯು ಇಸ್ಲಾಮಿನಲ್ಲಿ ಇಲ್ಲದೇ ಇರುವುದೇ ಈ ರೀತಿಯ ಅನಿಶ್ಚಿತತೆಗಳಿಗೆ ಕಾರಣ. ನಿರ್ದಿಷ್ಟವಾದ ರೂಪ ಬೇಕಿದ್ದರೆ ಅವುಗಳಿಗೆ ಧಾರ್ಮಿಕ ಗ್ರಂಥಗಳಲ್ಲಿ ಕಂಡು ಬರಬೇಕು. ಅವುಗಳಲ್ಲಿ ಜನ್ಮ ದಿನಾಚರಣೆಯ ಆಧಾರ ಕಿಂಚಿತ್ತೂ ಕಂಡು ಬರುವುದಿಲ್ಲವಲ್ಲಾ?

## ಧಾರ್ಮಿಕ ವಿಧಿ ಇರುವುದೇ?

ಯಾವುದಾದರೊಂದು ಧಾರ್ಮಿಕ ಆಚರಣೆಗೆ ಧರ್ಮದಲ್ಲಿ ವಿಧಿಯಿರಬೇಕಲ್ಲವೇ? ವುಜೂಬ್, ಸುನ್ನತ್, ಹಲಾಲ್ ಎಂಬ ಯಾವುದರಲ್ಲಿ ಪ್ರವಾದಿ ಜನ್ಮ ದಿನಾಚರಣೆ ಸೇರಿದೆ? ವುಜೂಬೋ, ಸುನ್ನತ್ತೋ ಅಥವಾ ಹಲಾಲೋ? ಅದಕ್ಕೆ ಉತ್ತರ ಹೇಳಲು ಯಾರಿಗೂ ಸಾಧ್ಯವಿಲ್ಲ, ಯಾಕೆಂದರೆ ಧಾರ್ಮಿಕ ವಿಧಿಗಳನ್ನು ನಿಶ್ಚಯಿಸುವ ಕಾಲದಲ್ಲಿ ಈ ರೀತಿಯ ಆಚರಣೆ ಇರಲಿಲ್ಲ. ಈ ವಿಷಯದಲ್ಲಿ ಕಳೆದು ಗತ ಕಾಲಗಳಲ್ಲಿ "ಇಜ್‌ಮಾಅ್" (ಉಲಮಾಗಳ ಏಕಕಂಠ ನಿರ್ಧಾರ) ಉಂಟಾಗಿರಲಿಲ್ಲ. ಉಂಟಾಗಲು ಸಾಧ್ಯವೂ ಇಲ್ಲ. ಇದನ್ನು ಇತರ ಧಾರ್ಮಿಕ ಕ್ರಿಯೆಗಳೊಡನೆ ತುಲನೆ ಮಾಡಲು ಕೂಡಾ ಸಾಧ್ಯವಿಲ್ಲ.

ಇನ್ನು ಇರುವುದು, ಮದ್‌ಹ್ (ಹೊಗಳಿಕೆ) ಹೇಳುವುದು ಸುನ್ನತ್. ಅನ್ನದಾನ ಸುನ್ನತ್ - ಎಂಬೀ ಪ್ರಚಾರಗಳು. ಹಾಗಾದರೆ ಪ್ರವಾದಿ(ಸ)ರವರ ಜನ್ಮ ದಿನದಂದು ಆ ಸುನ್ನತ್‌ಗಳನ್ನು ಮಾಡುವುದಾದರೆ ಪ್ರತ್ಯೇಕ ಪುಣ್ಯವಿರುವುದೇ? ಪ್ರವಾದಿ(ಸ)ರವರ ಮದ್‌ಹನ್ನು ಯಾವಾಗ ಬೇಕಾದರೂ ಹೇಳಬಹುದು. ಎಲ್ಲಾ ದಿನಗಳಲ್ಲೂ ಅವರ(ಸ) ಮೇಲೆ ಸಲಾತ್ ಹೇಳಲಾಗುತ್ತದೆ. ಯಾವ ಕಾಲದಲ್ಲೇ ಆದರೂ ಅನ್ನದಾನವು ಪುಣ್ಯವಾಗಿದೆ. ಅತಿ ಸಂಕಷ್ಟದ ಸಮಯಗಳಲ್ಲಿ ದರಿದ್ರರಿಗೆ ಅನ್ನದಾನ ಮಾಡುವುದು ಬಹಳ ಪುಣ್ಯಕರವಾಗಿದೆ. ಆದರೆ ಈ ಕರ್ಮಗಳನ್ನೆಲ್ಲಾ ಪ್ರವಾದಿ(ಸ)ರವರ ಜನ್ಮ ದಿನದಂದು ನಡೆಸುವುದಾದರೆ, ಇತರ ದಿನಗಳಲ್ಲಿ ನಿರ್ವಹಿಸುವುದಕ್ಕಿಂತ ಎಷ್ಟು ಪಟ್ಟು ಹೆಚ್ಚು ಪುಣ್ಯ ಲಭಿಸುತ್ತದೆ? ಉದಾಹರಣೆಗೆ ಒಬ್ಬನು ರಬೀಉಲ್ ಅವ್ವಲ್ ತಿಂಗಳಲ್ಲಿ ಮತ್ತು ಇನ್ನೊಬ್ಬನು ರಬೀಉಲ್ ಆಖಿರ್ ತಿಂಗಳಲ್ಲಿ ಅನ್ನದಾನ ಮಾಡುವುದಾದರೆ ಅವರಿಬ್ಬರಿಗೂ ಪ್ರತಿಫಲದಲ್ಲಿ ವ್ಯತ್ಯಾಸವಿದೆಯೇ? ಒಬ್ಬನು ರಬೀಉಲ್ ಅವ್ವಲ್ ತಿಂಗಳ 12ರಂದು, ಮತ್ತೊಬ್ಬನು ರಜಬ್ ತಿಂಗಳ 12ರಂದು, ಸಲಾತ್ ಹೇಳುವುದಾದರೆ, ಅವರಿಗೆ ದೊರೆಯುವ ಪ್ರತಿಫಲಗಳಲ್ಲಿ ವ್ಯತ್ಯಾಸವಿದೆಯೇ?

ಈ ಪ್ರಶ್ನೆಗಳಿಗೆ ಉತ್ತರಿಸಲು ಈ ಹಬ್ಬವನ್ನು ರಚಿಸಿದವರಿಗೆ ಸಾಧ್ಯವಿಲ್ಲ. ಈ ರೀತಿಯ ಗಂಭೀರ ಪ್ರಶ್ನೆಗಳನ್ನು ಅವರು ನಿರೀಕ್ಷಿಸುವುದಿಲ್ಲ. ಇತರ ಧಾರ್ಮಿಕ ನೇತಾರರಿಗೂ, ರಾಷ್ಟ್ರೀಯ ನಾಯಕರಿಗೂ ಜನ್ಮ ದಿನಾಚರಣೆಗಳಿರುವುದನ್ನು ಕಂಡಾಗ, ನಮ್ಮ ಪ್ರವಾದಿ(ಸ)ರವರು ಅವರಿಗಿಂತ ಕಡಿಮೆಯೇ ಎಂದು ಭಾವಿಸಿದ ಕೆಲವರು ಅವಸರದಲ್ಲಿ ರಚಿಸಿದ ಹಬ್ಬವಾಗಿದೆ ಇದು. ಇಸ್ಲಾಮಿನಲ್ಲಿ ಅದರ ಸ್ಥಾನವೇನು? ಹೇಗಿರುವುದು? ಎಂದು ಏನನ್ನೂ ಚಿಂತಿಸಲು ಅವರಿಗೆ ಸಮಯವಿರಲಿಲ್ಲ. ಆ ನಿಯಮಗಳನ್ನು ಜಗತ್ತಿನಾದ್ಯಂತ ಮುಸ್ಲಿಮರು ಆಚರಿಸುತ್ತಿರುವುದನ್ನು ಆ ಜನರು ಚಿಂತಿಸಿ ತಿಳಿಯಲೂ ಇಲ್ಲ. ಹಿಜ್ರಾ 600ರ ನಂತರ ಮೀಲಾದುನ್ನಬಿಯನ್ನು ರಚಿಸಿದವರು ಈ ರೀತಿ ಚಿಂತಿಸುವವರಾಗಿರಲಿಲ್ಲ.

ಪ್ರವಾದಿ ಮುಹಮ್ಮದ್(ಸ)ರು ತನ್ನ ಜನ್ಮ ದಿನವನ್ನು ಆಚರಿಸಿದ್ದರೇ? ಅವರು ತನಗಿಂತ ಮುಂಚಿನ ಪ್ರವಾದಿಗಳಲ್ಲಿ ಯಾರ ಜನ್ಮ ದಿನವನ್ನಾದರೂ ಆಚರಿಸಿದ್ದರೇ? ಪ್ರವಾದಿ ಮುಹಮ್ಮದ್(ಸ)ರ ಜನ್ಮ ದಿನವನ್ನು ಅಬೂಬಕರ್ ಸಿದ್ದೀಖ್(ರ), ಉಮರ್(ರ), ಉಸ್ಮಾನ್(ರ), ಅಲೀ(ರ) ಇವರಲ್ಲಿ ಯಾರಾದರೂ ಆಚರಿಸಿದ್ದರೇ? ಯಾರಾದರೂ ಸಹಾಬಿಗಳು ಆಚರಿಸಿದ್ದರೇ?

ಈ ಎಲ್ಲಾ ಪ್ರಶ್ನೆಗಳಿಗೂ "ಇಲ್ಲ"ವೆಂಬ ಉತ್ತರವನ್ನೇ ಎಲ್ಲರೂ ಹೇಳಬೇಕಾಗಿದೆ.

ಹಾಗಾದರೆ ಅದು ಇಲ್ಲವೆಂಬುದು ಸರ್ವವಿಧಿತ. ಪ್ರವಾದಿ(ಸ)ರಿಗೂ ಇಲ್ಲ, ಪೂರ್ವಿಕ ಪ್ರವಾದಿಗಳಿಗೂ ಇಲ್ಲ, ಸಹಾಬಿಗಳಿಗೂ ಇಲ್ಲ, ಸಾಮಾನ್ಯ ಮುಸ್ಲಿಮರಿಗೂ ಇಲ್ಲ.

ನಮಗೆ ಜನ್ಮ ದಿನಾಚರಣೆಯು ಇಲ್ಲವೇ ಇಲ್ಲ. ಅದಕ್ಕೆ ಇಸ್ಲಾಮಿನಲ್ಲಿ ಯಾವ ಸ್ಥಾನವೂ ಇಲ್ಲ.

ಇಸ್ಲಾಮಿನಿಂದ ಹೊರಗೆ ಅದಕ್ಕೆ ದೊಡ್ಡ ಸ್ಥಾನವಿರಬಹುದು. ಅದನ್ನು ಕಂಡು ಬೆರಗಾಗಬೇಕೆಂದಿಲ್ಲ. ನೇತಾರರ ಪ್ರತಿಮೆ ನಿರ್ಮಾಣಕ್ಕೆ ಇಸ್ಲಾಮಿನ ಹೊರಗೆ ಹಿರಿಯ ಸ್ಥಾನವಿದೆ. ವ್ಯಕ್ತಿ ಪೂಜೆಯ ಪರಿಣಾಮವಾಗಿ ಪ್ರತಿಮೆ ನಿರ್ಮಾಣವು ಉಂಟಾಯಿತು. ಅದರಿಂದಲೇ ಉದ್ಭವಗೊಂಡುದು ಜನ್ಮ ದಿನಾಚರಣೆ. ಅವುಗಳು ಇಸ್ಲಾಮಿಗೆ ಅಪರಿಚಿತವಾಗಿದೆ. ವ್ಯಕ್ತಿ ಪೂಜೆಯನ್ನು ಇಸ್ಲಾಮ್ ನಿಷೇಧಿಸಿದೆ. ಆದುದರಿಂದ ಜನ್ಮ ದಿನಾಚರಣೆಗಳು ಇಸ್ಲಾಮಿಗೆ ಅನ್ಯವಾಗಿದೆ.

ಕೆಲವು ಪ್ರವಾದಿಗಳ ಜನನದ ಬಗ್ಗೆ ಕುರ್‌ಆನ್ ಪ್ರಸ್ತಾಪಿಸಿದೆ. ಪ್ರವಾದಿ ಮೂಸಾ(ಅ), ಈಸಾ(ಅ),ರವರ ಜನನದ ಬಗ್ಗೆ ಕುರ್‌ಆನ್ ವಿವರಿಸಿದ್ದರೂ ಅವರ ಜನ್ಮ ದಿನವು ಯಾವಾಗ ಎಂದು ಅಲ್ಲಾಹು ಹೇಳಲಿಲ್ಲ. ಆದ್ದರಿಂದಲೇ ಮುಸ್ಲಿಮ್ ಸಮೂಹದಲ್ಲಿ ಜನ್ಮ ದಿನವನ್ನು ಗಮನಿಸುವ ಅಥವಾ ಆಚರಿಸುವ ಪದ್ಧತಿ ಸಮೀಪ ಕಾಲದ ವರೆಗೆ ಇರಲಿಲ್ಲ. ಸರಕಾರೀ ಕಛೇರಿಗಳಿಗೆ ಅವಶ್ಯವೆಂದು ಕಂಡು ಬಂದಾಗ ಮಾತ್ರವೇ ಮುಸ್ಲಿಮರು ಆ ಬಗ್ಗೆ ಗಮನ ಹರಿಸಿದರು.

ಇಂದು, ಮೀಲಾದುನ್ನಬಿ ಆಚರಣೆಗಳಿಗೆ ನೇತೃತ್ವ ನೀಡುವ ಹಲವು ನೇತಾರರಿಗೆ ತಮ್ಮ ಜನ್ಮ ದಿನ ಯಾವುದೆಂದು ತಿಳಿಯದೇ ಇರಲು ಕೂಡಾ ಅದುವೇ ಕಾರಣವಾಗಿದೆ.

ಪ್ರವಾದಿ ಮುಹಮ್ಮದ್(ಸ)ರವರ ಜನನ ದಿನಾಂಕವು ಯಾವುದೆಂದು ಸ್ಪಷ್ಟವಾಗಿ ಹೇಳಲು ಯಾರಿಗೂ ಸಾಧ್ಯವಾಗದಿರುವುದು, ಅದೇ ಕಾರಣದಿಂದಾಗಿದೆ.

ಜನ್ಮ ದಿನಾಚರಣೆಯು ಇಸ್ಲಾಮಿನಲ್ಲಿಲ್ಲ. ಅದನ್ನು ಅಲ್ಲಾಹು ಅಥವಾ ಅವನ ಸಂದೇಶವಾಹಕರು ನಿಶ್ಚಯಿಸಿಲ್ಲ. ಆದುದರಿಂದ ನಮಗದು ಬೇಡ. ನಾವು ಅದನ್ನು ಅಲಕ್ಷಿಸುವ. ಅದುವೇ ನಮಗೆ ಪುಣ್ಯ.

•

## ಕುರ್‌ಆನಿನ ಚಿಂತನೆಗಳು - 37

ಅಶ್ರಫಲಿ ನಡುಪದವು

# ತೆರೆದಿಟ್ಟ ಬಾಗಿಲುಗಳು

هَٰذَا ذِكْرٌ ۚ وَإِنَّ لِلْمُتَّقِينَ لَحُسْنَ مَآبٍ ﴿٤٩﴾
جَنَّاتِ عَدْنٍ مُّفَتَّحَةً لَّهُمُ الْأَبْوَابُ ﴿٥٠﴾
مُتَّكِئِينَ فِيهَا يَدْعُونَ فِيهَا بِفَاكِهَةٍ كَثِيرَةٍ وَشَرَابٍ ﴿٥١﴾

"ಇದೊಂದು ಸ್ಮರಣೆಯಾಗಿದೆ. ದೇವ ಭಯವುಳ್ಳವರಿಗೆ ಅತ್ಯುತ್ತಮ ಮರಳುದಾಣವಿದೆ. ಅವರಿಗಾಗಿ ಬಾಗಿಲುಗಳು ತೆರೆದಿಟ್ಟಿರುವ ಶಾಶ್ವತ ವಾಸದ ಸ್ವರ್ಗೋದ್ಯಾನಗಳು. ಅವುಗಳಲ್ಲಿ ಅವರು ಒರಗಿ ಕುಳಿತು (ಆಜ್ಞಾಪಿಸುತ್ತಾ) ಹೇರಳ ಫಲಗಳು ಹಾಗೂ ಪಾನೀಯಗಳಿಗಾಗಿ ಅಪೇಕ್ಷಿಸುತ್ತಿರುವರು. (ಕುರ್‌ಆನ್ 38: 49-51)

ಸಹನೆ ಹಾಗೂ ದೇವ ಸ್ಮರಣೆ ಎಂಬೀ ಎರಡು ಗುಣಗಳು ಮಾನವನನ್ನು ಅಗಣಿತವೂ ಶಾಶ್ವತವೂ ಆದ ಸುಖ-ಸೌಕರ್ಯಗಳಿಗೆ ಯೋಗ್ಯರನ್ನಾಗಿ ಮಾಡುತ್ತದೆ. ಇಹಲೋಕದಲ್ಲಿ ಕೆಲವು ನಿಯಮಗಳನ್ನು ಪಾಲಿಸಬೇಕು ಮತ್ತು ಕೆಲವು ನಿಷೇಧಗಳನ್ನು ಅಂಗೀಕರಿಸಬೇಕು. ಅದಕ್ಕಾಗಿ ಹೆಚ್ಚು ಸಹನೆ ಬೇಕಾಗಿದೆ. ಸಂಪತ್ತು, ಲೈಂಗಿಕಾಸಕ್ತಿ ಇತ್ಯಾದಿಗಳು ತಾಳ್ಮೆಯಿಲ್ಲದವರನ್ನು ದಾರಿ ತಪ್ಪಿಸುವಂತಹದ್ದಾಗಿದೆ. ನ್ಯಾಯ ಮಾರ್ಗದಲ್ಲೇ ಸಂಪಾದಿಸತಕ್ಕದ್ದು. ಸಂಪಾದಿಸಿದ್ದರಲ್ಲಿ ಒಂದು ನಿಶ್ಚಿತ ಪಾಲನ್ನು ಬಡವರಿಗೆ ಕೊಡ ಬೇಕಾಗಿದೆ. ಲೈಂಗಿಕ ದಾಹವನ್ನು ಹೇಗೆಂದಾದರೂ ತಣಿಸಲಾಗದು. ನಿಯಮಾನುಸಾರವಾದ ಮಾರ್ಗದ ಮೂಲಕ ಮಾತ್ರವೇ ಆಗತಕ್ಕದ್ದು. ಇವೆಲ್ಲಾ ದೇವ ಭಯವುಳ್ಳವನ ಅಥವಾ ದೇವ ಭಕ್ತನ ಲಕ್ಷಣವಾಗಿದೆ. ಜಾಗ್ರತೆ ವಹಿಸಬೇಕಾದರೆ ತಾಳ್ಮೆ ಅತ್ಯಗತ್ಯ. ದೈಹಿಕ, ಮಾನಸಿಕ ಆಸಕ್ತಿಗಳತ್ತ ಆಕರ್ಷಿಸುವ ಈ ಪ್ರಲೋಭನಗಳನ್ನೆಲ್ಲಾ ನಿರಾಕರಿಸಿದರೆ, ಕೇಳಿದ್ದೆಲ್ಲವೂ ಸಿಗುವಂತಹ ಮತ್ತು ಆದರದಿಂದ ಆದರಪೂರ್ವಕ ಸ್ವಾಗತಿಸಲ್ಪಡುವಂತಹ ಒಂದು ಲೋಕ ನಮಗೆ ಸಿಗಲಿಕ್ಕಿದೆ ಎಂಬ ವಿಶ್ವಾಸ ಅವರಲ್ಲುಂಟಾಗುತ್ತದೆ. ಆ ವಿಶ್ವಾಸ ಮತ್ತು ಸಹನೆ ಪರಸ್ಪರ ಪೂರಕವಾಗಿದೆ. ಮರಣಾನಂತರ ಮಾತ್ರವೇ ಅದಕ್ಕೆ ಪ್ರತಿಫಲ ಸಿಗುತ್ತದೆ. ಆತುರಪಟ್ಟು ಫಲ ವಿಲ್ಲ. ಜೀವಮಾನವಿಡೀ ತಾಳ್ಮೆಯುಂಡಿರಬೇಕು. ನೋವು, ಸಹವಾಸ, ಮಾತು, ಆಸ್ವಾದ ಮುಂತಾ ದವುಗಳೆಲ್ಲಾ ಜಾಗ್ರತೆ ವಹಿಸುವ ಏಕದೇವ ವಿಶ್ವಾಸಿಗಳ ಮುಂದೆ ಸ್ವರ್ಗದ ಬಾಗಿಲುಗಳು ತೆರೆಯಲ್ಪಡುವುವು.

# ಪರದೂಷಣೆ ಮತ್ತು ಚಾಡಿ: ನರಕದೆಡೆಗೆ ಹಾದಿ

✍ ಅಬೂನ್ನಿಸಾ, ಮಂಗಳೂರು

(ಕಳೆದ ಸಂಚಿಕೆಯಿಂದ)

## 4. ಕೆಡುಕಿನ ವಿರುದ್ಧ ಮುಸ್ಲಿಮರಿಗೆ ಎಚ್ಚರಿಕೆ ಮತ್ತು ಸಲಹೆ

ಈ ಬಗ್ಗೆ ಕಣ್ಣಿಗೆ ಕಾಣುವಂತಹ ಹಲವು ವಿಷಯಗಳು ಇಲ್ಲಿವೆ. ಹದೀಸ್ ವರದಿಗಾರರು ನಂಬಲರ್ಹರಲ್ಲವೆಂದು ಘೋಷಿಸುವುದು ಮತ್ತು ಸಾಕ್ಷ್ಯ ಕೊಡುವುದು. ಹೀಗೆ ಮಾಡಲು ಇಜ್‌ಮಾ(ವಿದ್ವಾಂಸರ ಒಮ್ಮತಾಭಿಪ್ರಾಯ)ದನುಸಾರ ಅನುಮತಿಯಿದೆ. ಇದಕ್ಕೆದುರಾಗಿಯಾದರೆ ಅಗತ್ಯತೆಗೆ ತಕ್ಕಂತೆ ಅದು ನಿರ್ಬಂಧವಾಗುತ್ತದೆ. ವ್ಯಕ್ತಿಗಳ ಗುಣಗಳ ಕುರಿತು ಯಾರಾದರೂ ಕೇಳಿದರೆ ಪೂರ್ವಿಕರು ಮುಚ್ಚು ಮರೆಯಿಲ್ಲದೆ ತಮ್ಮ ಅಭಿಪ್ರಾಯ ತಿಳಿಸುತ್ತಿದ್ದರು. ಉದಾಹರಣೆಗೆ ಮಗಳ ಮದುವೆಯ ವಿಚಾರದಲ್ಲಿ. ಫಾತಿಮಾ ಬಿಂತ್ ಖೈಸ್‌ರಿಂದ ವರದಿ: "ನಾನು ಪುನರ್ವಿವಾಹಕ್ಕೆ ಸಿದ್ಧಳಾದಾಗ ಪ್ರವಾದಿ(ಸ)ರ ಬಳಿ ಹೋಗಿ ಅಲ್ಲಾಹನ ರಸೂಲರೇ, ಮುಆವಿಯಾ ಇಬ್‌ನು ಅಬೂ ಸುಫ್ಯಾನ್ ಮತ್ತು ಅಬೂ ಜಹ್ಮ್ ಇಬ್‌ನು ಹಿಶಾಮ್ ಎಂಬವರು ನನ್ನನ್ನು ವಿವಾಹವಾಗುವ ಅಪೇಕ್ಷೆ ವ್ಯಕ್ತ ಪಡಿಸಿದ್ದಾರೆ. ನಾನೇನು ಮಾಡಬೇಕು" ಎಂದು ಕೇಳಿದೆ. ಪ್ರವಾದಿ(ಸ)ರು ಹೇಳಿದರು: "ಅಬೂಜಹ್ಮ್‌ನ ಕುರಿತು ಹೇಳುವುದಾದರೆ, ಆತ ತನ್ನ ಬೆತ್ತವನ್ನು ಹೆಗಲಿನಿಂದ ಕೆಳಗಿಳಿಸುವುದೇ ಇಲ್ಲ. ಅಂದರೆ ಆತ ಯಾವಾಗಲೂ ಪ್ರಯಾಣದಲ್ಲಿರುತ್ತಾರೆ) ಮುಆವಿಯಾನ ಕುರಿತು ಹೇಳುವುದಾದರೆ, ಆತ ತೀರಾ ಬಡವ. ಆತನಲ್ಲಿ ಯಾವುದೇ ಸಂಪತ್ತಿಲ್ಲ. ನೀನು ಉಸಾಮ ಇಬ್‌ನು ಝೈದ್‌ನನ್ನು ವಿವಾಹವಾಗು" ಎಂದರು. ನಾನು ಅಸಮ್ಮತಿಸಿದೆ. ಅವರು(ಸ) ಪುನಃ ಹೇಳಿದರು: "ನೀನು ಉಸಾಮ ಇಬ್‌ನು ಝೈದ್‌ನನ್ನು ವಿವಾಹವಾಗು". ಹಾಗೆ ನಾನು ಅವರೊಂದಿಗೆ ವಿವಾಹವಾದೆ. ಅದರಲ್ಲಿ ಅಲ್ಲಾಹು ನನಗೆ ಒಳಿತನ್ನು ದಯಪಾಲಿಸಿದ್ದಾನೆ ಮತ್ತು ನಾನು ಅವರೊಂದಿಗೆ ಸುಖವಾಗಿದ್ದೆ" (ಸಹೀಹುಲ್ ಬುಖಾರಿ, ಸಹೀ ಮುಸ್ಲಿಮ್ ಮತ್ತು ಮುವತ್ತ).



ಒಬ್ಬ ವ್ಯಕ್ತಿಯೊಂದಿಗೆ ಸಂಬಂಧ ಕುದುರಿಸಲಿಕ್ಕಾಗಿ ಯಾರಾದರೂ ಬಂದು ನಿಮ್ಮೊಡನೆ ಆ ವ್ಯಕ್ತಿಯ ಕುರಿತು ವಿಚಾರಿಸಿದರೆ, ನಿಮಗೆ ತಿಳಿದಿರುವ ವಿಷಯಗಳನ್ನು ಹೇಳುವುದು ಕರ್ತವ್ಯವಾಗಿದೆ. ನಿಮ್ಮ ಉದ್ದೇಶ ನಿಮ್ಮೊಡನೆ ವಿಚಾರಿಸಿದವನ ಒಳಿತಿಗಾಗಿರಬೇಕು.

ಇನ್ನೊಂದು ಘಟನೆಯನ್ನು ನೀವು ನೋಡುವುದಾದರೆ, ಒಬ್ಬ ವಿದ್ಯಾರ್ಥಿಯು ಜ್ಞಾನವನ್ನು ಗಳಿಸಲಿಕ್ಕಾಗಿ ಒಬ್ಬ ಸುಧಾರಕ ಅಥವಾ ದಾರಿಗೆಟ್ಟವನ ಬಳಿಗೆ ಹೋಗುತ್ತಾನೆ. ಇದು ವಿದ್ಯಾರ್ಥಿಯ ಮೇಲೆ ಪರಿಣಾಮ ಬೀರಬಹುದೆಂದು ನೀವು ಭಯ ಪಡುವುದಾದರೆ ಸುಧಾರಕನ ಕುರಿತು ವಿದ್ಯಾರ್ಥಿಗೆ ನೀವು ಮನವರಿಕೆ ಮಾಡಿ ಕೊಡಬೇಕು. ವಿದ್ಯಾರ್ಥಿಯ ಒಳಿತಿನ ಉದ್ದೇಶ ಮಾತ್ರವೇ ನಿಮ್ಮಲ್ಲಿರಬೇಕು ವಿನಾ ಮತ್ಸರದಿಂದಾಗಿರಬಾರದು. ಆದ್ದರಿಂದ ಉಪದೇಶ ಮಾಡುವಾಗ ನಮ್ಮ ಉದ್ದೇಶವನ್ನು ಪರೀಕ್ಷಿಸಬೇಕಾಗಿದೆ.

ಅಧಿಕಾರಸ್ಥನೊಬ್ಬ ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದಿದ್ದರೆ ಅಥ'ವಾ ನಾಯಕನೊಬ್ಬ ತನ್ನ ಜವಾಬ್ದಾರಿಯನ್ನು ನೆರವೇರಿಸದಿದ್ದರೆ ಅವರ ಅಯೋಗ್ಯತನ ಅಥ'ವಾ ನಿರ್ಲಕ್ಷ್ಯತನ ವನ್ನು ಸಂಬಂಧಪಟ್ಟವರಿಗೆ ತಿಳಿಸಬೇಕಾದ ಅಗತ್ಯವಿದೆ. ಇಲ್ಲದಿದ್ದರೆ ಜನ ಸಾಮಾನ್ಯರು ತೊಂದರೆಗೀಡಾಗುವ ಸಾಧ್ಯತೆಯಿದೆ.

## 5. ವ್ಯಕ್ತಿಯ ಗುಣ ಲಕ್ಷಣ

ಕೆಲವರನ್ನು ಜನರು ಅವರ ಗುಣ ಲಕ್ಷಣದಿಂದ ಗುರುತಿಸುತ್ತಾರೆ. ಹೇಗೆಂದರೆ ಕುಂಟ, ಮಂದ ಕಣ್ಣಿನವ, ಕಿವುಡ, ಕುರುಡ ಇತ್ಯಾದಿಯಾಗಿ ಗುರುತು ಹೇಳುವುದು ಸಮ್ಮತಾರ್ಹವಾಗಿದೆ. ಆದರೆ ಹೀನೈಸಬಾರದು.

6. ಯಾರಾದರೂ ಇಸ್ಲಾಮಿ ನಿಯಮಗಳನ್ನು ಬಹಿರಂಗವಾಗಿ ಉಲ್ಲಂಘಿಸಿದರೆ ಮತ್ತು ಒಂದಿಷ್ಟೂ ಅಳುಕಿಲ್ಲದೆ ಮದ್ಯಪಾನ ಮಾಡಿದರೆ, ವ್ಯಭಿಚರಿಸಿದರೆ, ಇನ್ನೊಬ್ಬರ ಸೊತ್ತನ್ನು ಸ್ವಾರ್ಥಕ್ಕಾಗಿ ಬಳಸಿದರೆ ಅಂತಹವರ ಕುರಿತು ಮುಸ್ಲಿಮ್ ಉಮ್ಮತ್‌ಗೆ ತಿಳಿಸುವುದು ಸಮ್ಮತಾರ್ಹವಾಗಿದೆ. ಆದರೆ ರಹಸ್ಯವಾಗಿ ಯಾರಾದರೂ ಇಂತಹ ಕೆಟ್ಟ ಕಾರ್ಯಗಳನ್ನೆಸಗಿದರೆ ಅದನ್ನು ಬಹಿರಂಗ ಪಡಿಸುವುದು ಸಮ್ಮತಾರ್ಹವಲ್ಲ. ಉಮರ್ ಬಿನ್ ಖತ್ತಾಬ್(ರ) ಹೇಳಿದರು: "ಕೆಟ್ಟ ಕಾರ್ಯಗಳನ್ನೆಸಗುವವನಿಗೆ ಮತ್ತು ತನ್ನ ದುಷ್ಕೃತ್ಯಗಳನ್ನು ಬಹಿರಂಗವಾಗಿ ಹೇಳಿಕೊಳ್ಳುವ ನೀತಿಗೆಟ್ಟವನಿಗೆ ಯಾವ ಗೌರವವೂ ಇಲ್ಲ" ಅಸ್ಸಲತ್ ಇಬ್‌ನು ತಾರೀಫ್‌ರವರು ಅಲ್ ಹಸ್ಸನ್‌ರವರಲ್ಲಿ ಕೇಳುತ್ತಾರೆ: "ತನ್ನ ದುಷ್ಟತನವನ್ನು ಬಹಿರಂಗವಾಗಿ ಹೇಳಿಕೊಳ್ಳುವ ಒಬ್ಬ ವ್ಯಕ್ತಿಯ ಕುರಿತು ಮಾತನಾಡಿದರೆ ಅದನ್ನು ಪರದೂಷಣೆಯೆಂದು ಪರಿಗಣಿಸಬಹುದೇ? ಅವರು ಹೇಳಿದರು: "ಇಲ್ಲ".

(ಮುಂದುವರಿಯುವುದು)

# ವಿವಾಹಕ್ಕಾಗಿ ಇಸ್ಲಾಮ್ ಸ್ವೀಕರಿಸಿದರೆ ಮತಾಂತರ ಸಿಂಧುವಲ್ಲ!

## ಅಲಹಾಬಾದ್ ಹೈಕೋರ್ಟ್

ನವದೆಹಲಿ: ಅನ್ಯ ಮತೀಯ ಯುವತಿಯರು ಇಸ್ಲಾಮಿನ ಕುರಿತು ಅರಿಯದೆ, ಇಸ್ಲಾಮಿನಲ್ಲಿ ವಿಶ್ವಾಸವಿಡದೆ ಕೇವಲ ಮುಸ್ಲಿಮ್ ಯುವಕರನ್ನು ವಿವಾಹವಾಗಲಿಕ್ಕಾಗಿ ಇಸ್ಲಾಮಿಗೆ ಮತಾಂತರಗೊಳ್ಳುವುದು ಸಿಂಧುವಲ್ಲ ಎಂದು ಅಲಹಾಬಾದ್ ಹೈಕೋರ್ಟ್ ಮಹತ್ವದ ತೀರ್ಪು ನೀಡಿದೆ. ಉತ್ತರ ಪ್ರದೇಶದ ವಿವಿಧ ಜಿಲ್ಲೆಗಳ ಐದು ದಂಪತಿಗಳು ವಿವಿಧ ಹಂತಗಳಲ್ಲಿ ಸಲ್ಲಿಸಿದ ಅರ್ಜಿಗಳನ್ನು ಒಟ್ಟಾಗಿ ಪರಿಗಣಿಸಿ ಜಸ್ಟೀಸ್ ಸೂರ್ಯ ಪ್ರಕಾಶ್ ಕೇಶರ್ವಾಣಿ ಈ ತೀರ್ಪು ನೀಡಿದ್ದಾರೆ.

ಅರ್ಜಿದಾರರಲ್ಲಿ ಪತಿಯಂದಿರೆಲ್ಲಾ ಮುಸ್ಲಿಮರು ಮತ್ತು ಪತ್ನಿಯರೆಲ್ಲಾ ಹಿಂದುಗಳಾಗಿದ್ದಾರೆ. ಯುವತಿಯರು ವಿವಾಹದ ಸಂದರ್ಭದಲ್ಲಿ ಇಸ್ಲಾಮನ್ನು ಸ್ವೀಕರಿಸಿದ್ದರು. ವಿವಾಹಿತರಾದ ಹಿನ್ನೆಲೆಯಲ್ಲಿ ಜತೆಯಾಗಿ ಜೀವಿಸಲು ಕಾನೂನಿನ ರಕ್ಷಣೆ ಒದಗಿಸಬೇಕೆಂದು ಅವರು ನ್ಯಾಯಾಲಯಕ್ಕೆ ಮೊರೆ ಹೋಗಿದ್ದರು. ಆದರೆ ಅರ್ಜಿದಾರರ ವಿವಾಹವು ಕುರ್‌ಆನಿನ 2ನೇ ಅಧ್ಯಾಯದ 221ನೇ ಸೂಕ್ತಕ್ಕೆ ವಿರುದ್ಧವಾಗಿದೆಯೆಂದು ಹೈಕೋರ್ಟ್ ತನ್ನ ತೀರ್ಪಿನಲ್ಲಿ ಸ್ಪಷ್ಟ ಪಡಿಸಿದೆ. "ಅವಿಶ್ವಾಸಿನಿಯಾದ ಸ್ತ್ರೀಯು ಸತ್ಯ ವಿಶ್ವಾಸ ಸ್ವೀಕರಿಸುವ ವರೆಗೆ ಅವರನ್ನು ನೀವು ವಿವಾಹವಾಗಬಾರದು. ಅದೇ ರೀತಿ ಅವಿಶ್ವಾಸಿಗಳು ಸತ್ಯವಿಶ್ವಾಸ ಸ್ವೀರಿಸುವ ವರೆಗೆ ನಿಮ್ಮ ಹೆಣ್ಣು ಮಕ್ಕಳನ್ನು ಅವರಿಗೆ ವಿವಾಹ ಮಾಡಿ ಕೊಡಬಾರದು" ಎಂದು ಕುರ್‌ಆನಿನ ಸೂರಾಃ ಅಲ್ ಬಕರದ 221ನೇ ಸೂಕ್ತದಲ್ಲಿ ಹೇಳಲಾಗಿದೆ.

ಅರ್ಜಿದಾರರಾದ ಸ್ತ್ರೀಯರು ತಮಗೆ ಇಸ್ಲಾಮಿನ ಕುರಿತು ತಿಳಿದಿಲ್ಲ. ವಿವಾಹವಾಗಲಿಕ್ಕಾಗಿ ಯುವಕನ ಧರ್ಮಕ್ಕೆ ಪರಿವರ್ತನೆಗೊಂಡಿದ್ದೇವೆಂದು ಹೇಳಿಕೆಯಲ್ಲೂ ವಿಚಾರಣೆಯಲ್ಲೂ ಹೇಳಿದ್ದರು. ಮತಾಂತರದಲ್ಲಿ ಸರಿಯಾದ ಮನ ಪರಿವರ್ತನೆ ಮತ್ತು ಹೊಸ ಧರ್ಮದ ನೈಜ ಪ್ರಮಾಣಗಳಲ್ಲಿ ದೃಢ ವಿಶ್ವಾಸವಿರಬೇಕು. ಅಲ್ಲಾಹನ ಏಕತ್ವದಲ್ಲಿ ಮತ್ತು ಪ್ರವಾದಿ ಮುಹಮ್ಮದರಲ್ಲಿ ವಿಶ್ವಾಸವಿಡದೆ ಇಸ್ಲಾಮನ್ನು ಸ್ವೀಕರಿಸಿದ್ದೇವೆಂದು ಹೇಳುವುದನ್ನು ಸತ್ಯ ಸಂಧವಾಗಿ ಪರಿಗಣಿಸಲಾಗುವುದಿಲ್ಲವೆಂದು ನ್ಯಾಯಾಲಯ ಒತ್ತಿ ಹೇಳಿತು. ಯುವಕನ ಪ್ರೇರಣೆಯಿಂದ ನಡೆದ ಮತಾಂತರವು ಮುಸ್ಲಿಮ್ ವೈಯಕ್ತಿಕ ಕಾನೂನಿನನ್ವಯ ನೆಲೆನಿಲ್ಲದು ಮತ್ತು ಅವರಿಗೆ ದಂಪತಿಗಳು ಎಂಬ ನೆಲೆಯಲ್ಲಿ ರಕ್ಷಣೆ ಸಿಗದು ಎಂಬ ಯು.ಪಿ. ಸರಕಾರದ ವಾದವನ್ನು ಹೈಕೋರ್ಟ್ ಎತ್ತಿ ಹಿಡಿಯಿತು. ವಾಸ್ತವದಲ್ಲಿ ವಿಶ್ವಾಸ ಬದಲಾಗದೆ ವಿವಾಹಕ್ಕಾಗಿ ಮಾತ್ರ ಇಸ್ಲಾಮನ್ನು ಸ್ವೀಕರಿಸುವುದು ನಿರರ್ಥಕವೆಂದು 2000ರಲ್ಲಿ ಸುಪ್ರೀಂ ಕೋರ್ಟ್ ತೀರ್ಪು ನೀಡಿತ್ತೆಂದು ಅಲಹಾಬಾದ್ ಹೈಕೋರ್ಟ್ ತನ್ನ ತೀರ್ಪಿನಲ್ಲಿ ಉಲ್ಲೇಖಿಸಿದೆ.

---

## ಯಹೂದಿ ನಿರ್ಮಿತ ಕಟ್ಟು ಕಥೆಗಳು!

(3ನೇ ಪುಟದಿಂದ)

ಬೇಕು. ಸತ್ಯನಿಷೇಧಿಗಳಾಗಿ ನರಕಕ್ಕೆ ಹೋಗಲು ದಾರಿ ತೋರಿಸುವ ಮಾಲೆ, ಮೌಲೀದ್, ರಾತೀಬ್‌ಗಳನ್ನು ರಾಶಿ ಹಾಕಿ ಬೆಂಕಿ ಕೊಟ್ಟು ಉರಿಸಿ, ಅಲ್ಲಾಹನ ಪವಿತ್ರ ಗ್ರಂಥವಾದ ಕುರ್‌ಆನ್‌ನೆಡೆಗೂ, ಮನುಕುಲದ ಮಾರ್ಗದರ್ಶಿ ಪ್ರವಾದಿ ಮುಹಮ್ಮದ್(ಸ)ರ ಸುನ್ನತ್ ನೆಡೆಗೂ ಮರಳದಿದ್ದರೆ ಸ್ವರ್ಗ ನಿಷಿದ್ಧವೆಂಬುದು ನೆನಪಿರಲಿ. ●




✍ ಪ್ರೊ ಪಿ. ಅಬ್ದುಲ್ಲ. ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

# ವಸ್ತ್ರಧಾರಣೆ

**ಪುರುಷರು:**

قَالَ رَسُولُ اللهِ ﷺ : أَزْرَةُ الْمُؤْمِنِ إِلَى أَنْصَافِ سَاقَيْهِ لاَ جُنَاحَ عَلَيْهِ فِيمَا بَيْنَهُ وَبَيْنَ الكَعْبَيْنِ مَا أَسْفَلَ مِنْ ذَالِكَ فَفِي النَّارِ. قَالَ ذَالِكَ ثَلاَثَ مَرَّاتٍ. وَلاَ يَنْظُرُ اللهُ يَوْمَ القِيَمَةِ إِلَى مَنْ جَرَّ إِزَارَهُ بَطَرًا (ابوداود وابن ماجه)

ರಸೂಲುಲ್ಲಾಹಿ(ಸ)ರು ಹೇಳಿದರು: "ಸತ್ಯವಿಶ್ವಾಸಿಯ ಬಟ್ಟೆ ಆತನ ಕಣಕಾಲಿನ ಮಧ್ಯದವರೆಗಿರಬೇಕು. ಅದರ ಮತ್ತು ಹರಡುಗಂಟಿನ ನಡುವೆಯಾಗುವುದಾದರೆ ಅಡ್ಡಿಯಿಲ್ಲ. ಆದರೆ ಅದಕ್ಕಿಂತ ಕೆಳಗೆ ಇಳಿದರೆ ಅದು ನರಕಕ್ಕೆ ಇರುವಂತಹದ್ದಾಗಿದೆ. (ಈ ಮಾತನ್ನು ಪ್ರವಾದಿ(ಸ)ರು ಮೂರು ಬಾರಿ ಪುನರಾವರ್ತಿಸಿದರು). ಅಹಂಕಾರದಿಂದ ಬಟ್ಟೆಯನ್ನು ಎಳೆದುಕೊಂಡು ಹೋಗುವವನನ್ನು ಪುನರುತ್ಥಾನದಂದು ಅಲ್ಲಾಹು ನೋಡಲಾರ. (ಅಬೂದಾವೂದ್, ಇಬ್‌ನು ಮಾಜ). ಇದು ಉಟ್ಟ ಬಟ್ಟೆ ಅಥವಾ ಪ್ಯಾಂಟ್ ಕಾಲಿನ ಹರಡು ಗಂಟಿಗಿಂತ ಕೆಳಗಿಳಿಯಬಾರದೆಂಬ ಆದೇಶವಾಗಿದೆ . ಹೀಗೆ ಧರಿಸಿದ ಮೇಲೂ ಕೆಳಗಿಳಿಯುವುದಾದರೆ ತಕ್ಷಣ ಮೇಲಕ್ಕೆ ಮಾಡಬೇಕು. ಧೋತಿ, ಪ್ಯಾಂಟ್, ಪೈಜಾಮಗಳನ್ನು ಹರಡು ಗಂಟಿಗಿಂತ ಕೆಳಗಿಳಿಸಿ ಅಹಂಭಾವದಿಂದಲ್ಲ ಎಂದು ಹೇಳುವುದು ಧಿಕ್ಕಾರವಾಗಿದೆ".

**ಮಹಿಳೆಯರು:**

قَالرَسُولُ اللهِ ﷺ : صِنْفَانِ مِنْ أَهْلِ النَّارِ لَمْ أَرْهُمَا قَوْمٌ مَعَهُمْ سِيَاطٌ كَأَذْنَابِ البَقَرِيَضْرِبُونَ بِهَا النَّاسَ، وَنِسَاءٌ كَاسِيَاتٌ عَارِيَاتٌ مُمِيلاَتٌ مَائِلاَتٌ رُءُسُهُنَّ كَأَسْنِمَةِ البُخْتِ المَائِلَةِ لاَ يَدْخُلْنَ الجَنَّةَ وَلاَ يَجِدْنَ رِيحَهَا لَتُوجَدُ مِنْ مَسِيرَةِ كَذَا وَكَذَ. (مسلم)

ರಸೂಲುಲ್ಲಾಹಿ(ಸ)ರು ಹೇಳಿದರು: "ನರಕದ ಹಕ್ಕುದಾರರಲ್ಲಿ ಹಲವು ತರದವರಿದ್ದು ಅವರಲ್ಲಿ ಎರಡು ತರಹದವರನ್ನು ನಾನು ಕಾಣಲಿಲ್ಲ. (ಅಂದರೆ ಅವರು ಆ ಮೇಲೆ ಬರುವವರು ಎಂದರ್ಥ). ಅವರಲ್ಲಿ ಒಂದು ವಿಭಾಗದವರೆಂದರೆ ಹಸುವಿನ ಬಾಲದಂತಹ ಚಾವಟಿಯೊಂದಿಗೆ ನಡೆಯುವವರು ಮತ್ತು ಅದರಿಂದ ಜನರಿಗೆ ಹೊಡೆಯುವವರು. ಎರಡನೇ ವಿಭಾಗದವರೆಂದರೆ, ಸ್ತ್ರೀಯರು. ಉಡುಪು ಧರಿಸಿದ್ದರೂ ನಗ್ನರಾಗಿರುವ, ವಶೀಕರಿಸುವ ಮತ್ತು ವೈಯ್ಯಾರದಿಂದ ನಡೆಯುವ ಸ್ತ್ರೀಯರು. ಅವರ ತಲೆಯು ಕೊಬ್ಬಿದ ಒಂಟೆಯ ಡುಬ್ಬದಂತಿರುವುದು. ಅವರು ಸ್ವರ್ಗಕ್ಕೆ ಪ್ರವೇಶಿಸಲಾರರು. ಅದರ ಪರಿಮಳವನ್ನು ಸಹಾ ಅನುಭವಿಸಲಾರರು. ಅದರ ಪರಿಮಳ ಅದೆಷ್ಟೋ ದೂರದ ವರೆಗೆ ತಲುಪಿದರೂ ಕೂಡಾ" (ಮುಸ್ಲಿಮ್).

وَقُل لِّلْمُؤْمِنَٰتِ يَغْضُضْنَ مِنْ أَبْصَٰرِهِنَّ وَيَحْفَظْنَ فُرُوجَهُنَّ وَلَا يُبْدِينَ زِينَتَهُنَّ إِلَّا مَا ظَهَرَ مِنْهَا ۖ وَلْيَضْرِبْنَ بِخُمُرِهِنَّ عَلَىٰ جُيُوبِهِنَّ

ಅತ್ಯುನ್ನತನಾದ ಅಲ್ಲಾಹು ಹೇಳುತ್ತಾನೆ: "ಮತ್ತು ಸತ್ಯವಿಶ್ವಾಸಿನಿಯರೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿಳಿಸಲಿಕ್ಕೂ ತಮ್ಮ ಪರಿಶುದ್ಧತೆಯನ್ನು ಕಾಪಾಡಿಕೊಳ್ಳಲಿಕ್ಕೂ (ಬಹಿರಂಗ ಸ್ಥಳಗಳಲ್ಲಿ) ತಮ್ಮ ಸೌಂದರ್ಯಗಳ ಪೈಕಿ (ಸಭ್ಯತೆಯಿಂದ) ಪ್ರಕಟವಾಗುವಂತಹವುಗಳ ಹೊರತು (ಬೇರಾವುದನ್ನೂ) ತೋರಿಸದಿರಲಿಕ್ಕೂ ಹೇಳಿರಿ. ಮತ್ತು ಅವರು ತಮ್ಮ ಶಿರೋವಸ್ತ್ರದ ತುದಿಗಳನ್ನು ತಮ್ಮ ಎದೆಗಳ ಮೇಲೆ ಹೊದ್ದುಕೊಳ್ಳಲಿ" (ಕುರ್‌ಆನ್ 24:31).

ಅನ್ಯರ ಮುಂದೆ ಹಾಜರಾಗುವಾಗ ಮುಖ ಮತ್ತು ಮುಂಗೈಗಳ ಹೊರತು ಶರೀರದ ಎಲ್ಲಾ ಭಾಗಗಳನ್ನೂ ಕಡ್ಡಾಯವಾಗಿ ಮುಚ್ಚಿರಬೇಕು.

**ಹೊಸ ಬಟ್ಟೆ ಧರಿಸುವಾಗ ಹೀಗೆ ಪ್ರಾರ್ಥಿಸಬೇಕು:**

اللَّهُمَّ لَكَ الحَمْدُ أَنْتَ كَسَوْتَنِيهِ أَسْأَلُكَ خَيْرَهُ وَخَيْرَ مَا صُنِعَ لَهُ وَأَعُوذُ بِكَ مِنْ شَرِّهِ وَشَرِّ مَا صُنِعَ لَهُ. (ابوداود والترمذي)

ಓ ಅಲ್ಲಾಹ್, ನಿನಗೆ ಸ್ತುತಿ. ನನಗೆ ಇದನ್ನು ತೊಡಿಸಿದುದು ನೀನೇ ಅದರ ಒಳಿತನ್ನು ಮತ್ತು ಅದು ನಿರ್ಮಿಸಲ್ಪಟ್ಟಿರುವುದರ ಒಳಿತನ್ನು ನಿನ್ನೊಡನೆ ನಾನು ಬೇಡುತ್ತೇನೆ. ಅದರ ಕೇಡಿನಿಂದ ಮತ್ತು ಅದು ನಿರ್ಮಿಸಲ್ಪಟ್ಟಿರುವುದರ ಕೇಡಿನಿಂದ ನಿನ್ನೊಡನೆ ನಾನು ರಕ್ಷಣೆ ಕೋರುತ್ತೇನೆ" (ಅಬೂದಾವೂದ್, ತಿರ್ಮುದಿ).

**ಹೊಸತಲ್ಲದ ಬಟ್ಟೆ ಧರಿಸುವಾಗ:**

الحَمْدُ للهِ الَّذِي كَسَانِي هَذَا وَرَزَقَنِيهِ مِنْ غَيْرِ حَوْلٍ مِنِّي وَلاَ قُوَّةٍ.

ನನ್ನ ಯಾವುದೇ ಸಾಮರ್ಥ್ಯವಿಲ್ಲದೆ ನನಗೆ ಈ ಬಟ್ಟೆಯನ್ನು ಒದಗಿಸಿ ನನಗೆ ಇದನ್ನು ತೊಡಿಸಿದ ಅಲ್ಲಾಹನಿಗೆ ಸರ್ವಸ್ತುತಿ.

**ಹೊಸ ಬಟ್ಟೆ ಧರಿಸಿದವನಿಗಾಗಿ ಪ್ರಾರ್ಥನೆ:**

تُبْلِي وَيُخْلِفُ اللهُ تَعَالَى. (ابوداود)

"ಇದು ನಾಶವಾಗಬಹುದು. ಇದಕ್ಕೆ ಬದಲಾಗಿ ಅಲ್ಲಾಹು ನಿನಗೆ ನೀಡಲಿ" (ಅಬೂದಾವೂದ್).

**ಯಾವ ಬದಿಯಿಂದ ಬಟ್ಟೆ ಧರಿಸಬೇಕು:**

ಬಟ್ಟೆ ಧರಿಸುವಾಗ 'ಬಿಸ್ಮಿಲ್ಲಾಹಿ' ಎಂದು ಹೇಳುತ್ತಾ ಬಲ ಬದಿಯಿಂದ ಪ್ರಾರಂಭಿಸಬೇಕು. ಕಳಚುವಾಗ 'ಬಿಸ್ಮಿಲ್ಲಾಹ್' ಎನ್ನುತ್ತಾ ಎಡ ಬದಿಯಿಂದ ಪ್ರಾರಂಭಿಸಬೇಕು.

**ಪಾದರಕ್ಷೆ:**

ಚಪ್ಪಲಿ, ಶೂ ಇತ್ಯಾದಿಗಳನ್ನು ಧರಿಸುವಾಗಲೂ ಇದೇ ರೀತಿ ಮಾಡಬೇಕಾಗಿದೆ.

**ಆರಾಧನೆಯ ಸಂದರ್ಭದಲ್ಲಿ:**

يَٰبَنِيٓ ءَادَمَ خُذُواْ زِينَتَكُمۡ عِندَ كُلِّ مَسۡجِدٖ

ಅತ್ಯುನ್ನತನಾದ ಅಲ್ಲಾಹು ಹೇಳುತ್ತಾನೆ: "ಓ ಆದಮರ ಸಂತತಿಗಳೇ, ನೀವು ಎಲ್ಲಾ ನಮಾಝ್‌ನ ಸ್ಥಳ (ಅಥವಾ ಸಮಯ)ಗಳಲ್ಲೂ ನಿಮ್ಮ ಅಲಂಕಾರ(ಉಡಿಗೆ, ತೊಡಿಗೆ)ಗಳನ್ನು ಧರಿಸಿಕೊಳ್ಳಿರಿ" (ಕುರ್‌ಆನ್ 7:31). ನಮಾಝ್ ಮತ್ತಿತರ ಆರಾಧನೆಗಳನ್ನು ನಿರ್ವಹಿಸುವಾಗ ಇದ್ದುದರಲ್ಲಿ ಒಳ್ಳೆಯ ಹಾಗೂ ಶುಚಿಯಾದ ಬಟ್ಟೆಗಳನ್ನು ಧರಿಸಬೇಕು. ರಾತ್ರಿ ಉಡುಪಿನಲ್ಲಿ ನಮಾಝ್‌ಗಾಗಿ ಮಸೀದಿಗೆ ಹೋಗುವುದು ಭೂಷಣವಲ್ಲ.

(ಮುಂದುವರಿಯುವುದು)

**ಪವಿತ್ರ ಇಸ್ಲಾಮ್ ಮುಸ್ಲಿಮೇತರರು ಹೇಳುವಂತೆ...**



Hillary Rodham Clinton
ಪ್ರಸ್ತುತ ಅಮೇರಿಕಾದ ವಿದೇಶಾಂಗ ಸಚಿವೆ.
"Newyork Times" ಗೆ 1996ರಲ್ಲಿ ಬರೆದ ಅಂಕಣದಲ್ಲಿ

ಇಸ್ಲಾಮ್ ಅಮೇರಿಕಾದಲ್ಲಿ ಅತೀ ವೇಗದಲ್ಲಿ ಬೆಳೆಯುತ್ತಿರುವ ಧರ್ಮವಾಗಿದೆ. ನಮ್ಮ ಪೈಕಿ ಹಲವಾರು ಜನರಿಗೆ ಅದೊಂದು ಮಾರ್ಗದರ್ಶಿಯೂ, ದೃಢತೆಯ ಸ್ತಂಭವೂ ಆಗಿದೆ.

سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು

## ಒಂದು ಅವಲೋಕನ ಭಾಗ -31



# ಹಂಝ(ರ)ರವರ ಕರುಳನ್ನು ಜಗಿದುಗಿದ ಹಿಂದ್!!

ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

ಇಸ್ಲಾಮಿಗಾಗಿ ಜೀವ ತೆತ್ತ ಸಹಾಬಿಗಳ ಚರಿತ್ರೆ ತಿಳಿಯುವುದೆಂದರೆ ಅನೇಕರಿಗೆ ರೋಮಾಂಚಕ ವಿಷಯ.

ಸಹಾಬಿಗಳ ನಡೆ-ನುಡಿ, ಅವರ ಬದುಕಿನಲ್ಲಿ ನಡೆದ ರೋಚಕ ಘಟನೆಗಳು, ಸಹಾಬಿಗಳು ರಣಾಂಗಣದಲ್ಲಿ ಪ್ರಕಟಿಸಿದ ಶೌರ್ಯ, ಕೆಚ್ಚೆದೆಯ ಸಾಹಸಮಯ ಪ್ರವೃತ್ತಿಗಳ ಬಗ್ಗೆ ನಾವು ಬಹಳಷ್ಟು ತಿಳಿದುಕೊಂಡಿದ್ದೇವೆ, ತಿಳಿಯುವುದು ಅಗತ್ಯ ಕೂಡಾ.

ನಮ್ಮ ಪಂಡಿತರು ವೇದಿಕೆ ಏರಿ, ನಮಗೆ ಕಲಿಸಿಕೊಟ್ಟ ಸಹಾಬಿಗಳ ಜೀವನದ ಅವಿಸ್ಮರಣೀಯ ಘಟನೆಗಳು ಹಾಗೂ ಆ ಮಹಾತ್ಮರು ತೋರಿಸಿದ ಸದಾಚಾರದ ಮೌಲ್ಯಗಳು ನಮ್ಮ ಬದುಕಿಗೆ ದಾರಿ ದೀಪ ಎಂಬುದರಲ್ಲಿ ಸಂಶಯವಿಲ್ಲ.

ಆದರೆ ಚಾರಿತ್ರಿಕ ಪಾಠ ಎಂಬ ನೆಲೆಯಲ್ಲಿ ಮಹಾತ್ಮರ ಬದುಕಿನ ಕುರಿತು ಕಲಿಯುವಾಗಲೂ ಪವಿತ್ರ ಕುರ್‌ಆನ್ ಹಾಗೂ ಅಧಿಕೃತ ಹದೀಸ್‌ಗಳನ್ನು ಪ್ರಧಾನ ಮಾನದಂಡವಾಗಿ ಬಳಸಬೇಕಾದುದು ಅವಶ್ಯಕ.

ಏಕೆಂದರೆ ಪೂರ್ವಿಕರ ಕುರಿತು ಉಲ್ಲೇಖಿಸಲ್ಪಡುವ ಅನೇಕ ಕಥೆಗಳಲ್ಲಿ ವಾಸ್ತವಿಕತೆಗೆ ವಿರುದ್ಧವಾದ ಅಂಶಗಳಿರುತ್ತವೆ. ಇದಕ್ಕೆ ಕಾರಣ ಪವಿತ್ರ ಕುರ್‌ಆನ್ ಹಾಗೂ ಅಧಿಕೃತ ಹದೀಸ್‌ಗಳ ಆಧಾರದಲ್ಲಿ ಚರಿತ್ರೆಯನ್ನು ಕಲಿಯುವುದರ ಬದಲು ಆಧಾರ ರಹಿತವಾಗಿ ಯಾರ್‍ಯಾರೋ ಬರೆದಿಟ್ಟ ಅರಬಿ ಚರಿತ್ರೆ ಗ್ರಂಥಗಳನ್ನು ಅತಿಯಾಗಿ ಅವಲಂಬಿಸಿದ್ದು, ಎಷ್ಟರ ತನಕ ಎಂದರೆ ಮುಸ್ಲಿಯಾರ್‌ಗಳು ಯುದ್ಧ ಮತ್ತಿತರ ವಿಷಯಗಳಿಗೆ ಸಂಬಂಧಿಸಿದ ಘಟನೆಗಳನ್ನು ಉಲ್ಲೇಖಿಸುವಾಗ ವಾಸ್ತವಿಕತೆಯೊಂದಿಗೆ ಅತಿ ರಂಜಕತೆಯನ್ನೂ ಬೆರೆಸುತ್ತಿದ್ದರು. ಕೆಲವೊಮ್ಮೆ ಅವರು ಉಲ್ಲೇಖಿಸುತ್ತಿದ್ದ ಘಟನೆಗಳಿಗೆ ವಾಸ್ತವಿಕತೆಯೊಂದಿಗೆ ಸಂಬಂಧ ಕಲ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಉದಾಹರಣೆಗೆ ಹಂಝ(ರ)ರವರು ರಣಾಂಗಣದಲ್ಲಿ ಹುತಾತ್ಮರಾದ ಸಂದರ್ಭ ಹಿಂದ್ ಎಂಬ ಮಹಿಳೆ ಆ ಮಹಾತ್ಮರ ಕರುಳನ್ನು ಹಿಂಡಿ ಜಗಿದರು ಎಂಬುದಾಗಿ ಬಣ್ಣಿಸಲಾಗುತ್ತದೆ. ಇದು ವಾಸ್ತವ ವಿರುದ್ಧವಷ್ಟೇ ಅಲ್ಲ, ಪ್ರಮಾಣ ವಿರುದ್ಧ ಕೂಡಾ!

ಪ್ರವಾದಿ(ಸ)ರವರ ಚಿಕ್ಕಪ್ಪ ಹಂಝ(ರ)ರವರು ಹುತಾತ್ಮರಾದ ವೇಳೆ ಉತ್‌ಬತ್‌ನ ಮಗಳು ಹಿಂದ್ ಎಂಬ ಮಹಿಳೆ ಹಂಝ(ರ)ರವರ ಕರುಳನ್ನು ಹೊರ ತೆಗೆದು ಜಗಿದರು ಎಂದು ಯುದ್ಧ ಚರಿತ್ರೆ ನಿರೂಪಣಾ ಗ್ರಂಥಗಳಲ್ಲಿ ಬರೆದಿಡಲಾಗಿದೆ.

ಹಂಝ(ರ)ರವರ ಯುದ್ಧ ಚರಿತ್ರೆಯನ್ನು ನಿರೂಪಿಸುವ ಯಾವುದೇ ಮುಸ್ಲಿಯಾರ್ ಅಥವಾ ಮೌಲವಿ ಈ ಘಟನೆಯನ್ನು ಉಲ್ಲೇಖಿಸದೆ ಭಾಷಣ ಪೂರ್ಣಗೊಳಿಸುವುದಿಲ್ಲ.

ಹಿಂದ್(ಬಳಿಕ ಆಕೆ ಇಸ್ಲಾಮ್ ಸ್ವೀಕರಿಸಿದ್ದಾರೆ) ಹಂಝರವರ ಕರುಳನ್ನು ಜಗಿದುಗಿದ ಚರಿತ್ರೆಯನ್ನು ಕೆದಕುತ್ತಾ ಹೋದರೆ ಅದರ ಮೂಲ ಬೇರು ಕಾಣಿಸುವುದು ದುರ್ಬಲ ವರದಿಗಳಲ್ಲಿ...!

ಇಬ್ನು ಮಸ್‌ಊದ್(ರ)ರಿಂದ: "ಉಹ್ದ್ ಯುದ್ಧ ಸಂದರ್ಭ ಜನರು ಹಂಝರವರನ್ನು ತಡಕಾಡಿದಾಗ ಒಂದೆಡೆ ಅವರು ನೆಲಕ್ಕುರುಳಿಬಿದ್ದಿರುವುದು ಕಾಣಿಸಿತು. ಅವರ ಹೊಟ್ಟೆ ಸೀಳಿಹೋಗಿತ್ತು. ಹಿಂದ್ ಅವರ ಕರುಳನ್ನು ಕಿತ್ತು ಜಗಿಯುತ್ತಿರುವುದನ್ನು ಪ್ರವಾದಿ(ಸ)ರು ಕಂಡರು" (ಅಹ್ಮದ್).

ಈ ಹದೀಸ್ ದುರ್ಬಲ ಎಂದು ವಿದ್ವಾಂಸರು ಸ್ಪಷ್ಟ ಪಡಿಸಿದ್ದಾರೆ. (ನೋಡಿ: ಅತ್ತಹ್‌ದೀಬ್ 7:207) ಅಷ್ಟೇ ಅಲ್ಲದೆ ಶಅ್‌ಬಿ ಇಬ್ನು ಮಸ್ ಊದ್(ರ)ರವರಿಂದ ಉಲ್ಲೇಖಿಸಿದ್ದಾಗಿ ಇದರಲ್ಲಿದೆ. ವಾಸ್ತವದಲ್ಲಿ ಶಅ್‌ಬಿ ಇಬ್ನು ಮಸ್‌ಊದ್‌ರಿಂದ ಇದನ್ನು ಕೇಳಿಯೇ ಇಲ್ಲ ಎಂಬುದಾಗಿ ಅಬೂ ಹಾಕಿಂ ಹಾಗೂ ದಾರುಖುತ್‌ನಿ ವಿವರಿಸುತ್ತಾರೆ.

ಉಹ್ದ್ ಯುದ್ಧದಲ್ಲಿ ಶತ್ರುಗಳ ಪ್ರಧಾನ ಗುರಿ ಹಂಝ(ರ)ರವರನ್ನು ವಧಿಸುವುದಾಗಿತ್ತು. ಅದಕ್ಕಾಗಿ ಅವರು ಎಲ್ಲಾ ವಿಧ ಸಿದ್ಧತೆ ನಡೆಸಿದರು. ಮುಶ್ರಿಕರ ನಾಯಕನಾಗಿದ್ದ ಝುಬೈರ್ ಬಿನ್ ಮುತಿಮ್‌ಗೆ ವಹ್‌ಶಿ ಎಂಬ ಗುಲಾಮನಿದ್ದ.

ಬದ್ರ್ ಯುದ್ಧದಲ್ಲಿ ತನ್ನ ಪಿತೃ ಸಹೋದರನನ್ನು ಹತ್ಯೆ ಗೈದುದಕ್ಕೆ ಪ್ರತೀಕಾರವಾಗಿ ಹಂಝರವರ ಹುಟ್ಟಡಗಿಸಲು ಝುಬೈರ್ ವಹ್‌ಶಿಗೆ ಸೂಚಿಸಿದರು. ಅಷ್ಟೇ ಅಲ್ಲ, ಹಂಝ ಅವರನ್ನು ವಧಿಸಿದರೆ ಧಾರಾಳ ಸಂಪತ್ತಿನೊಂದಿಗೆ ಗುಲಾಮ ವಿಮೋಚನೆಯ ವಾಗ್ದಾನವನ್ನೂ ವಹ್‌ಶಿಗೆ ನೀಡಲಾಯಿತು.

ಇತ್ತ ಬದ್ರ್ ಯುದ್ಧದ ಸಂದರ್ಭ ಹಿಂದ್ ಎಂಬ ಮಹಿಳೆ ತನ್ನ ತಂದೆ ಹಾಗೂ ಪಿತೃ ಸಹೋದರನನ್ನು ಕಳೆದು ಕೊಂಡಿದ್ದಳು. ಅವರನ್ನು ವಧಿಸಿದ್ದು ಹಂಝ(ರ)ರವರಾಗಿದ್ದರೆಂಬ ಕಾರಣಕ್ಕಾಗಿ ಹಿಂದ್‌ಗೆ ಸಹಜವಾಗಿಯೇ ಹಂಝ ಅವರ ಮೇಲೆ ವಿಪರೀತ ಕೋಪವಿತ್ತು. ತನ್ನ ಪ್ರತೀಕಾರ ತೀರಿಸಲು ಹಿಂದ್ ವಹ್‌ಶಿಗೆ ಆರ್ಥಿಕ ಪ್ರಲೋಭನೆಯೊಡ್ಡಿ ಹಂಝ(ರ)ರವರ ವಿರುದ್ಧ ಛೂ ಬಿಟ್ಟಳು. ಉಹ್ದ್ ಯುದ್ಧದಲ್ಲಿ ಹಂಝರವರ ಶರೀರ ಮುಶ್ರಿಕರ ಆಕ್ರಮಣಕ್ಕೊಳಗಾಗಿ ಛಿದ್ರವಿಛಿದ್ರವಾಗಿದ್ದೇನೋ ನಿಜ. ಆದರೆ ಬಹುತೇಕ ಚರಿತ್ರೆಗಾರರು ನಿರೂಪಿಸುವಂತೆ ಹಿಂದ್ ಹಂಝರವರ ಮೃತ ದೇಹ ತಿವಿದು ಕರುಳನ್ನು ಸೀಳಿ ಜಗಿದು ಉಗಿದರು ಎಂಬುದು ಯಾವುದೇ ಸಹೀಹ್ ಆದ ಹದೀಸ್‌ಗಳಲ್ಲಿಲ್ಲ.

ಈ ಬಗ್ಗೆ ಉಲ್ಲೇಖಿಸಲ್ಪಡುವ ಕೆಲವು ಹದೀಸ್‌ಗಳು ಇಂತಿವೆ:

ಪ್ರವಾದಿ(ಸ)ರವರ ಚಿಕ್ಕಪ್ಪ ಹಂಝ(ರ)ರವರ ಕಳೇಬರವನ್ನು ಪತ್ತೆ ಹಚ್ಚಿದಾಗ ಉದರ ಸೀಳಿಕೊಂಡ ಸ್ಥಿತಿಯಲ್ಲಿ ಅವರ ದೇಹ ಕಾಣಿಸಿತು. ವಹ್‌ಶಿ ಕರುಳನ್ನು ಕತ್ತರಿಸಿ ಹಿಂದ್‌ಗೆ ನೀಡಿದನು. (ಬೈಹಕಿ) ಇದು ದುರ್ಬಲ ಹದೀಸ್:

ಇನ್ನೊಂದು ವರದಿ ನೋಡಿ - ವಹ್‌ಶಿ ಹೀಗೆ ವಿವರಿಸುತ್ತಾನೆ: "ಉಹ್ದ್ ಯುದ್ಧದ ಸಮಯ ನಾನು ಹಂಝರ ಉದರ ಸೀಳಿ ಅದರಿಂದ ಕರುಳನ್ನು ಬೇರ್ಪಡಿಸಿ ತೆಗೆದೆ. ಬಳಿಕ ಅದರೊಂದಿಗೆ ಉತ್‌ಬತ್‌ನ ಪುತ್ರಿ ಹಿಂದ್‌ಳ ಹತ್ತಿರ ತೆರಳಿ "ನಿನ್ನ ತಂದೆಯ ಹಂತಕನನ್ನು ಕೊಂದರೆ ನನಗೆ ಏನನ್ನು ಕೊಡುವಿ" ಎಂದು ಕೇಳಿದ. ಅದಕ್ಕೆ "ನೀನು ಏನು ಬೇಕಾದರೂ ಕೇಳು ಕೊಡುತ್ತೇನೆ" ಎಂದಳು. ತಕ್ಷಣ ತನ್ನ ಕೈಯಲ್ಲಿದ್ದ ಕರುಳನ್ನು ಆಕೆಯ ಎದುರಿಗಿಟ್ಟೆ. ಆಕೆ ಅದನ್ನು ಕೈಗೆತ್ತಿಕೊಂಡು ಜಗಿದು ಉಗುಳಿದಳು. ನಂತರ ಪ್ರತಿಫಲವಾಗಿ ನನಗೆ ಒಡವೆ-ವಸ್ತ್ರಗಳನ್ನು ನೀಡಿದಳು" (ಮಗಾಝಿ 1:286).

ಇಮಾಮ್ ವಾಖಿದಿ ವರದಿ ಮಾಡಿದ ಈ ಹದೀಸ್ ಅತ್ಯಂತ ದುರ್ಬಲ ಮತ್ತು ಅಡಿಪಾಯ ರಹಿತ. ಇಂತಹ ಘಟನೆಗಳನ್ನು ಉಲ್ಲೇಖಿಸುವುದು ನಾಗರಿಕ ಸಮಾಜಕ್ಕೆ ಹೇಳಿದ್ದಲ್ಲ. ಇಮಾಮ್ ಶಾಫಿ, ನಸಾಈ ಮುಂತಾದ ವಿದ್ವಾಂಸರು ಈ ನಕಲಿ ವೃತ್ತಾಂತವನ್ನು ಕಟುವಾಗಿ ತಿರಸ್ಕರಿಸಿದ್ದಾರೆ.

## ತಿದ್ದುಪಡಿ

ಸಂಚಿಕೆ 24ರ "ಕೃತಕ ಮತ್ತು ದುರ್ಬಲ ಹದೀಸ್‌ಗಳು" ಎಂಬ ಅಂಕಣದಲ್ಲಿ "ಆದಂ ನಬಿ(ಅ) ಹವ್ವಾ ಬೀವಿ(ರ)ಯ ಮೇಲೆ ಸಲಾತ್ ಹೇಳಿದರು" ಎಂದು ತಪ್ಪಾಗಿ ಮುದ್ರಣಗೊಂಡಿದ್ದು ಅದನ್ನು "ಆದಮ್(ಅ) ಹವ್ವಾ ಬೀವಿ(ರ) ಅವರನ್ನು ವರಿಸುವಾಗ ಪ್ರವಾದಿ(ಸ)ರವರ ಮೇಲೆ ಸಲಾತ್ ಹೇಳಿದರು ಎಂದು ತಿದ್ದಿ ಓದಿಕೊಳ್ಳಬೇಕಾಗಿ ವಿನಂತಿ.

–ಸಂ.

## ಅಧ್ಯಾಯ - 3 ಆಲ್ ಇಮ್ರಾನ್

ಒಟ್ಟು ಸೂಕ್ತಗಳು: 200 | ಮುಹಮ್ಮದ್ ಅಮಾನಿ ಮೌಲವಿ | ಪ್ರಕಟಿತ ಸೂಕ್ತಗಳು: 91, 92, 93, 94

91 إِنَّ الَّذِينَ كَفَرُوا وَمَاتُوا وَهُمْ كُفَّارٌ فَلَنْ يُقْبَلَ مِنْ أَحَدِهِمْ مِلْءُ الْأَرْضِ ذَهَبًا وَلَوِ افْتَدَىٰ بِهِ ۗ أُولَٰئِكَ لَهُمْ عَذَابٌ أَلِيمٌ وَمَا لَهُمْ مِنْ نَاصِرِينَ ﴿٩١﴾

92 لَنْ تَنَالُوا الْبِرَّ حَتَّىٰ تُنْفِقُوا مِمَّا تُحِبُّونَ ۚ وَمَا تُنْفِقُوا مِنْ شَيْءٍ فَإِنَّ اللَّهَ بِهِ عَلِيمٌ ﴿٩٢﴾

93 كُلُّ الطَّعَامِ كَانَ حِلًّا لِبَنِي إِسْرَائِيلَ إِلَّا مَا حَرَّمَ إِسْرَائِيلُ عَلَىٰ نَفْسِهِ مِنْ قَبْلِ أَنْ تُنَزَّلَ التَّوْرَاةُ ۗ قُلْ فَأْتُوا بِالتَّوْرَاةِ فَاتْلُوهَا إِنْ كُنْتُمْ صَادِقِينَ ﴿٩٣﴾

94 فَمَنِ افْتَرَىٰ عَلَى اللَّهِ الْكَذِبَ مِنْ بَعْدِ ذَٰلِكَ فَأُولَٰئِكَ هُمُ الظَّالِمُونَ ﴿٩٤﴾

| | | | | | | |
|---|---|---|---|---|---|---|
| 91 | | | | | | |
| ಎಂದಿಗೂ ಸ್ವೀಕರಿಸಲಾಗದು فَلَنْ يُقْبَلَ | ಅವರು ಸತ್ಯನಿಷೇಧಿಗಳಾಗಿ وَهُمْ كُفَّارٌ | ಅವರು ಮರಣ ಹೊಂದಿದರು وَمَاتُوا | ನಿಶ್ಚಯವಾಗಿಯೂ ಸತ್ಯನಿಷೇಧಿಗಳು إِنَّ الَّذِينَ كَفَرُوا | | | |
| ಅಂತಹವರು أُولَٰئِكَ | ಅದನ್ನು بِهِ | ಅವನು ದಂಡ ನೀಡಿದರೂ وَلَوِ افْتَدَىٰ | ಬಂಗಾರವನ್ನು ذَهَبًا | ಭೂಮಿ ತುಂಬಾ مِلْءُ الْأَرْضِ | ಅವರಾರಿಂದಲೂ مِنْ أَحَدِهِمْ | |
| | ಸಹಾಯಕರಾಗಿ (ಯಾರೂ) مِنْ نَاصِرِينَ | ಮತ್ತು ಅವರಿಗಿಲ್ಲ وَمَا لَهُمْ | ವೇದನಾಭರಿತ أَلِيمٌ | ಶಿಕ್ಷೆ عَذَابٌ | ಅವರಿಗಿದೆ. لَهُمْ | |
| 92 | | | | | | |
| ಮತ್ತು ನೀವು ಏನನ್ನು ವೆಚ್ಚ ಮಾಡಿದರೂ وَمَا تُنْفِقُوا | ನೀವು ಇಷ್ಟ ಪಡುವವುಗಳ ಪೈಕಿ مِمَّا تُحِبُّونَ | ನೀವು ವೆಚ್ಚ ಮಾಡುವ ವರೆಗೆ حَتَّىٰ تُنْفِقُوا | ಪುಣ್ಯವನ್ನು الْبِرَّ | ನೀವು ಪಡೆಯುವುದೇ ಇಲ್ಲ لَنْ تَنَالُوا | | |
| | ಅರಿಯುವವನಾಗಿರುತ್ತಾನೆ عَلِيمٌ | ಆ ಬಗ್ಗೆ بِهِ | ಹಾಗಿದ್ದರೆ ಖಂಡಿತವಾಗಿಯೂ ಅಲ್ಲಾಹು فَإِنَّ اللَّهَ | ಯಾವುದಾದರೂ ವಸ್ತುವನ್ನು مِنْ شَيْءٍ | | |
| 93 | | | | | | |
| ಇಸ್ರಾಯೀಲರು (ಯಅ್ಖೂಬರು) إِسْرَائِيلُ | ನಿಷಿದ್ಧಗೊಳಿಸಿದುದರ ಹೊರತು إِلَّا مَا حَرَّمَ | ಇಸ್ರಾಯೀಲ್ ಸಂತತಿಗಳಿಗೆ لِبَنِي إِسْرَائِيلَ | ಧರ್ಮ ಬದ್ಧವಾಗಿದ್ದವು كَانَ حِلًّا | ಎಲ್ಲಾ ಆಹಾರ(ವಸ್ತು)ಗಳು كُلُّ الطَّعَامِ | | |
| ತೌರಾತನ್ನು بِالتَّوْرَاةِ | ಹಾಗಾದರೆ ತನ್ನಿರಿ فَأْتُوا | ಹೇಳಿರಿ قُلْ | ತೌರಾತ್ التَّوْرَاةُ | ಅವತೀರ್ಣಗೊಳ್ಳುವುದಕ್ಕಿಂತ أَنْ تُنَزَّلَ | ಮುಂಚೆ مِنْ قَبْلِ | ತನ್ನ ಮೇಲೆ عَلَىٰ نَفْسِهِ |
| | ಸತ್ಯವಂತರು صَادِقِينَ | ನೀವಾಗಿದ್ದರೆ إِنْ كُنْتُمْ | ಹಾಗೆ ಅದನ್ನು ಓದಿರಿ فَاتْلُوهَا | | | |
| 94 | | | | | | |
| ಅಕ್ರಮಿಗಳು مِنْ قَبْلِ | ಹಾಗಿದ್ದರೆ ಅವರೇ عَلَىٰ نَفْسِهِ | ಅದರ إِسْرَائِيلُ | ಬಳಿಕ إِلَّا مَا حَرَّمَ | ಸುಳ್ಳನ್ನು لِبَنِي إِسْرَائِيلَ | ಅಲ್ಲಾಹನ ಹೆಸರಲ್ಲಿ كَانَ حِلًّا | ಹಾಗಿರುವಾಗ ಯಾರು ಸೃಷ್ಟಿಸಿದರೋ كُلُّ الطَّعَامِ |

91. ನಿಶ್ಚಯವಾಗಿಯೂ ಸತ್ಯನಿಷೇಧ ಕೈಗೊಂಡು ಸತ್ಯ ನಿಷೇಧಿಗಳಾಗಿಯೇ ಮರಣ ಹೊಂದಿದವರಲ್ಲಿ ಯಾರಾದರೂ ಭೂಮಿ ತುಂಬಾ ಚಿನ್ನವನ್ನು ಪ್ರಾಯಶ್ಚಿತ್ತವಾಗಿ ಕೊಟ್ಟರೂ ಅದನ್ನು ಖಂಡಿತ ಸ್ವೀಕರಿಸಲಾಗುವುದಿಲ್ಲ. ಅವರಿಗೆ ವೇದನಾಭರಿತ ಶಿಕ್ಷೆಯಿದೆ ಮತ್ತು ಅವರಿಗೆ ಸಹಾಯಕರಾಗಿ (ಯಾರೂ) ಇರಲಾರರು.

92. (ಸತ್ಯವಿಶ್ವಾಸಿಗಳೇ) ನೀವು ಇಷ್ಟಪಡುವವುಗಳಿಂದ ವೆಚ್ಚಮಾಡುವ ವರೆಗೆ ನೀವು ಪುಣ್ಯವನ್ನು ಪಡೆಯಲಾರಿರಿ. ನೀವು ಯಾವುದೇ ವಸ್ತುವನ್ನು ವೆಚ್ಚ ಮಾಡುವುದಾದರೂ ಆ ಬಗ್ಗೆ ಅಲ್ಲಾಹು ಖಂಡಿತವಾಗಿಯೂ ಅರಿಯುವವನಾಗಿರುತ್ತಾನೆ.

93. ತೌರಾತ್ ಅವತೀರ್ಣಗೊಳ್ಳುವುದಕ್ಕಿಂತ ಮುಂಚೆ ಇಸ್ರಾಈಲರು (ಪ್ರವಾದಿ ಯಅ್ಖೂಬರು) ಸ್ವತಃ ನಿಷಿದ್ಧ ಗೊಳಿಸಿಕೊಂಡಿದ್ದುದರ ಹೊರತು ಎಲ್ಲಾ ಆಹಾರ (ವಸ್ತು) ಗಳು ಇಸ್ರಾಈಲ್ ಸಂತತಿಗಳಿಗೆ ಧರ್ಮಬದ್ಧವಾಗಿದ್ದವು. (ಪ್ರವಾದಿಯವರೇ) ಹೇಳಿರಿ: "ನೀವು ಸತ್ಯವಂತರಾಗಿದ್ದರೆ ತೌರಾತನ್ನು ತಂದು ಅದನ್ನು (ಒಮ್ಮೆ) ಓದಿರಿ."[80]

94. ಹೀಗಿರುವಾಗ ಆ ಬಳಿಕ ಯಾರು ಅಲ್ಲಾಹನ ಹೆಸರಲ್ಲಿ ಸುಳ್ಳನ್ನು ಸೃಷ್ಟಿಸಿದರೋ ಅವರೇ ಅಕ್ರಮಿಗಳು.

## ಪವಿತ್ರ ಇಸ್ಲಾಂ ಮುಸ್ಲಿಮೇತರರು ಹೇಳುವಂತೆ...



ಲಿಯೋ ಟಾಲ್‌ಸ್ಟಾಯ್
ರಷ್ಯಾದ ಖ್ಯಾತ ಬರಹಗಾರರು

ಮಹಮ್ಮದರು ಯಾವಾಗಲೂ ಕ್ರೈಸ್ತ ಧರ್ಮಕ್ಕಿಂತ ಶ್ರೇಷ್ಠರಾಗಿಯೇ ನಮಗೆ ಪರಿಚಯವಾಗುತ್ತಾರೆ. ಮನುಷ್ಯನೇ ದೇವರೆಂದು ಅವರು ಯಾವತ್ತೂ ರಾಜಿಯಾಗಲಿಲ್ಲ. ಸ್ವತಃ ಅವರನ್ನೇ ಆಗಲಿ ದೇವನಿಗೆ ಸಮಾನರು ಎಂದು ಯಾವತ್ತೂ ಅವರು ಹೇಳಲಿಲ್ಲ. ಮುಸ್ಲಿಮರು ದೇವನನ್ನು ಬಿಟ್ಟು ಉಳಿದ ಯಾವುದನ್ನೂ ಆರಾಧಿಸುವುದಿಲ್ಲ. ಮತ್ತು ಮಹಮ್ಮದರು ದೇವನ ಸಂದೇಶವಾಹಕರು ಎಂದು ಬಲವಾಗಿ ವಿಶ್ವಾಸವಿಡುತ್ತಾರೆ. ಇದರಲ್ಲಿ ಯಾವುದೇ ಗೂಢತ್ವವೂ ಇಲ್ಲ ರಹಸ್ಯವೂ ಇಲ್ಲ.

## ಪ್ರವಾದಿ(ಸ.ಅ)ರು ಮುಸ್ಲಿಮೇತರರು ಹೇಳುವಂತೆ...



ಥಾಮಸ್ ಕಾರ್ಲೈಲ್
(1795–1881)
ಸ್ಕಾಟ್‌ಲ್ಯಾಂಡಿನ ಇತಿಹಾಸ ತಜ್ಞರು.

ನಾವು ಪಾಶ್ಚಾತ್ಯರು ಮಹಮ್ಮದರ ಸುತ್ತ ಎಷ್ಟೇ ಆಸಕ್ತಿಯಿಂದ ಅಪಪ್ರಚಾರ ಮಾಡಿದರೂ ಅದು ನಮಗೇ ಸ್ವತಃ ನಾಚಿಕೆಗೇಡಿನ ವಿಚಾರವೇ ಹೊರತು ಆ ಮಹಾನುಭಾವರಿಗಲ್ಲ.

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2012-2014
Licence to Post without prepayment.
WPP/SK/MNG-104/2012-2014
Posted at Head Post Office, Mangalore.
Posting Date: 13th & 28th of Every Month
Publication Date: 10th & 25th of Every Month



# ವಾಟ್ಸಪ್ ಸಂದೇಶ ಕಾಲಂ

**ತೀರ್ಮಾನವನ್ನು ನೀವೇ ಮಾಡಿರಿ**
**ಏನು? ಇವರೆಲ್ಲರೂ ನೂತನವಾದಿಗಳಾಗಿದ್ದರೇ?**
**ಪ್ರವಾದಿಯೊಡನೆ ಸ್ನೇಹವಿರಲಿಲ್ಲವೇ?**

ರಬೀವುಲ್‌ಅವ್ವಲ್12

ಅಬೂಬಕ್ಕರ್(ರ)ರವರ ಖಿಲಾಫತ್‌ನಲ್ಲಿ 2 ಬಾರಿ, ಉಮರ್ (ರ)ರವರ ಖಿಲಾಫತ್‌ನಲ್ಲಿ 10 ಬಾರಿ, ಉಸ್ಮಾನ್ ಬಿನ್ ಅಫ್ಫಾನ್(ರ)ರವರ ಖಿಲಾಫತ್‌ನಲ್ಲಿ 12 ಬಾರಿ ಅಲಿ(ರ)ರವರ ಖಿಲಾಫತ್‌ನಲ್ಲಿ 5 ಬಾರಿ ಬಂದಿತ್ತು.

ಅನಂತರದ ಸಚ್ಚರಿತರಾದ ಸ್ವಹಾಬಿಗಳು, ತಾಬಿಈಗಳು ತಬಉತ್ತಾಬೀಈಗಳು, ಇಮಾಮ್ ಅಬೂ ಹನೀಫ, ಇಮಾಮ್ ಮಾಲಿಕ್, ಇಮಾಮ್ ಶಾಫಿಈ, ಇಮಾಮ್ ಅಹ್ಮದ್ ಬಿನ್ ಹಂಬಲ್ ಇವರೆಲ್ಲರ ಜೀವನದಲ್ಲಿ ಹಲವು ಬಾರಿ ರಬೀವುಲ್ ಅವ್ವಲ್ 12 ಕಳೆದಿತ್ತು.ಆದರೆ ಈ ಎಲ್ಲಾ ಮಹಾತ್ಮರು 12 ರಬೀವುಲ್‌ಅವ್ವಲ್‌ಗೆ ಮೆರವಣಿಗೆ, ಪತಾಕೆ, ಘೋಷಣೆ, ಅನ್ನದಾನ ಮಾಡಿದ ಬಗ್ಗೆ ಆಧಾರವಿಲ್ಲ.






ಅಲ್ಲಾಹನು ಜನರನ್ನು ಅವರ ಅತ್ಯಾಚಾರಗಳಿಗಾಗಿ ತಕ್ಷಣ ಹಿಡಿಯುತ್ತಿದ್ದರೆ ಭೂಮಿಯ ಮೇಲೆ ಒಂದು ಜೀವಿಯನ್ನೂ ಬಿಡುತ್ತಿರಲಿಲ್ಲ. ಆದರೆ ಅವನು ಎಲ್ಲರಿಗೂ ಒಂದು ನಿಶ್ಚಿತ ಸಮಯದ ವರೆಗೆ ಕಾಲಾವಕಾಶ ನೀಡುತ್ತಾನೆ. ಮುಂದೆ ಆ ಸಮಯ ಬಂದು ಬಿಟ್ಟೊಡನೆ ಅದರಿಂದ ಒಂದು ಕ್ಷಣವೂ ಹಿಂದೆ ಮುಂದೆ ಆಗುವಂತಿಲ್ಲ.
(ಪವಿತ್ರ ಕುರ್‌ಆನ್16:61)

ಬದುಕು ಎಂಬ ನೋಟ್ ಪುಸ್ತಕದ ಎರಡು ಪುಟಗಳನ್ನು ಸೃಷ್ಟಿಕರ್ತನು ಈಗಾಗಲೇ ತುಂಬಿಸಿದ್ದಾನೆ. ಪ್ರಥಮ ಪುಟದಲ್ಲಿ ಜನನವಾದರೆ ಕೊನೆಯ ಪುಟದಲ್ಲಿ ಮರಣ. ಇನ್ನು, ಮಧ್ಯದ ಪುಟಗಳಲ್ಲಿ ನೀವೇನನ್ನು ತುಂಬುತ್ತೀರೋ ಅದರ ಆಧಾರದಲ್ಲಿ, ನಿಮ್ಮ ಸೋಲು-ಗೆಲುವು ನಿರ್ಧರಿಸಲ್ಪಡುತ್ತದೆ.

ಬೆಳಿಗ್ಗೆ ಏಳುತ್ತೇನೆಂಬ ಬಲವಾದ ವಿಶ್ವಾಸದೊಂದಿಗೆ ನಾನು ರಾತ್ರಿ ಮಲಗುತ್ತೇನೆ. ಒಂದು ವೇಳೆ, ಒಂದು ರಾತ್ರಿಯಲ್ಲಿ ನಮ್ಮ ಸಾವು ಸಂಭವಿಸುತ್ತದೆ ಎಂಬುದು ಖಾತ್ರಿಯಿದ್ದರೆ ನಮ್ಮ ರಾತ್ರಿ ಹೇಗಿದ್ದೀತು? ಆದ್ದರಿಂದ ವಿಶ್ವಾಸ ಮತ್ತು ವಾಸ್ತವಗಳು ಬೆರೆತುಕೊಂಡ ಬದುಕು ನಮ್ಮದಾಗಿರಲಿ.

ಅಸೂಯೆಯಿಂದ ದೂರವಿರಿ. ಏಕೆಂದರೆ ಬೆಂಕಿಯು ಕಟ್ಟಿಗೆಯನ್ನು ನುಂಗುವಂತೆ ಅಸೂಯೆಯು ಒಳಿತುಗಳನ್ನು ನುಂಗಿ ಬಿಡುತ್ತದೆ.
- ಪ್ರವಾದಿ ಮುಹಮ್ಮದ್(ಸ)





ಕ್ರಿಸ್ಮಸ್ ದೇವ ಪುತ್ರನ ಜನ್ಮ ದಿನವಾಗಿದೆ ಎಂದು ಆಚರಿಸಲಾಗುತ್ತದೆ. ಆದರೆ ಬೈಬಲ್‌ಮತ್ತು ಕುರ್‌ಆನ್ ಇದನ್ನು ನಿಷೇಧಿಸುತ್ತದೆ. ಬೈಬಲ್ ಹೇಳುತ್ತದೆ: "ದೇವನು ಮಾನವನಲ್ಲ, ಮತ್ತು ದೇವನು ಮಾನವನ ಸಂತತಿಯೂ ಅಲ್ಲ". (23:19)

(ಪ್ರವಾದಿಯವರೇ) ಹೇಳಿರಿ: ಅಲ್ಲಾಹು, ಅವನು ಏಕೈಕ ದೇವನು. ಅಲ್ಲಾಹು ಎಲ್ಲರಿಗೂ ಎಂದೆಂದೂ ಆಶ್ರಯ ದಾತನಾಗಿರುವ ಯಜಮಾನನಾಗಿರುತ್ತಾನೆ (ಅವನಿಗೆ ಯಾರ ಆಶ್ರಯದ ಅಗತ್ಯವೂ ಇಲ್ಲ). ಅವನು (ಯಾರಿಗೂ) ಜನ್ಮ ನೀಡಿಲ್ಲ, ಮತ್ತು ಅವನು (ಯಾರ ಸಂತಾನವಾಗಿ) ಜನಿಸಿಯೂ ಇಲ್ಲ. ಮತ್ತು ಅವನಿಗೆ ಸರಿಸಮಾನರಾಗಿ (ಅಥವಾ ಅವನನ್ನು ಹೋಲುವವರಾಗಿ) ಯಾರೂ ಇಲ್ಲ. (ಕುರ್‌ಆನ್ 112)

ನೀವು ಗೆಲ್ಲಬೇಕೆಂಬ ಏಕೈಕ ಉದ್ದೇಶದಿಂದ ನಿಮ್ಮ ತಂದೆ ಬದುಕಿನಲ್ಲಿ ಧಾರಾಳ ಸೋಲುಗಳನ್ನು ಅನುಭವಿಸುತ್ತಾರೆ. ಆದ್ದರಿಂದ ನಿಮ್ಮ ಯಶಸ್ಸಿನ ಪ್ರತಿ ಸಂದರ್ಭದಲ್ಲಿ ಅವರನ್ನು ನೆನಪಿಸಿ, ಅವರಿಗಾಗಿ ಪ್ರಾರ್ಥಿಸಿ.



"ತಂದೆಯು ತನ್ನ ಮಕ್ಕಳಿಗೆ ಕೊಡುವ ವಸ್ತುಗಳ ಪೈಕಿ ಅತ್ಯುತ್ತಮ ವಸ್ತುವೆಂದರೆ ಅವರಿಗೆ ಉತ್ತಮವಾದ ಶಿಕ್ಷಣ ಮತ್ತು ತರಬೇತಿ".
-ಪ್ರವಾದಿ ಮುಹಮ್ಮದ್(ಸ)



Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad